# ಕರ್ಮಯೋಗ



ಸ್ವಾಮಿ ವಿವೇಕಾನಂದ



ಹಿತ್ಯ ಭಂಡಾರ, ಹುಬ್ಬಳ್ಳಿ

ಮೂವತ್ತನೆಯ ಪ್ರಕಟನೆ

# ಕರ್ಮಯೋಗ

ಸ್ವಾಮಿ ವಿವೇಕಾನಂದ



ಕನ್ನಡಿಸಿದವರು:

ಸುರೇಂದ್ರ ಶಿವರಾವ್ ದೇಸಾಯಿ, ಎಂ. ಎ.



೧೯೫೨

ಸಾಹಿತ್ಯ ಭಂಡಾರ, ಹುಬ್ಬಳ್ಳಿ

# ಪರಿವಿ

# ಮುನ್ನುಡಿ

ಭಾರತೀಯ ಸಂಸ್ಕೃತಿಯ ಪ್ರಕಾಶವನ್ನು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಬೀರಿದ ಮಹಾಮಹಿಮರಲ್ಲಿ ಶ್ರೀ ಸ್ವಾಮಿ ವಿವೇಕಾನಂದರು ಅಗ್ರಣಿಗಳು. ಅವರು ಮೊಟ್ಟಮೊದಲು ಅತ್ಯಂತ ಉಜ್ವಲವಾದ ತಮ್ಮ ವಾಣಿಯಿಂದ ಹಾಗೂ ಲೇಖನದಿಂದ ವೇದಾಂತ, ಯೋಗ, ಮುಂತಾದ ವಿಷಯಗಳನ್ನು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿಯೂ ಇಲ್ಲಿಯ ಆಂಗ್ಲ ವಿದ್ಯಾವಿಭೂಷಿತರಲ್ಲಿಯೂ ಲೋಕಪ್ರಿಯ ಮಾಡಿದರು. ಈ ಉಪಕಾರವನ್ನು ಭಾರತೀಯರು ಎಂದೂ ಮರೆಯಲಾರೆವು.

ಸ್ವಾಮಿ ವಿವೇಕಾನಂದರು ರಾಜಯೋಗ, ಜ್ಞಾನಯೋಗ, ಕರ್ಮಯೋಗ ಮುಂತಾದ ವಿಷಯಗಳನ್ನು ಕುರಿತು ಬಹಳ ಸುಲಭವಾದ ಭಾಷೆಯಲ್ಲಿ ಬರೆದು ಜನರಿಗೆ ತಿಳಿಸಿದ್ದಾರೆ. ವೇದಾಂತವು ನಿವೃತ್ತಿ ಮಾರ್ಗವನ್ನು ಹೇಳುವುದು ಎಂಬ ತಪ್ಪು ತಿಳಿವಳಿಕೆಯು ಇನ್ನೂ ರೂಢವಿದ್ದಾಗ ಕರ್ಮಯೋಗದ ಉಜ್ವಲ ವಾದ, ಉತ್ಸಾಹಯುಕ್ತ ಸಂದೇಶವನ್ನು ಬೀರುವುದು ಅತ್ಯಂತ ಅವಶ್ಯವಿದೆ. ಶ್ರೀ ಸ್ವಾಮಿ ವಿವೇಕಾನಂದರ ಕರ್ಮಯೋಗವೆಂಬ ಗ್ರಂಥವು ಈ ಕಾರ್ಯವನ್ನು ಉತ್ತಮ ರೀತಿಯಿಂದ ಮಾಡುವುದು. ಈ ಪುಸ್ತಕದ ಕನ್ನಡ ರೂಪಾಂತರವು ಜನರಲ್ಲಿ ಆದಷ್ಟು ಹರಡುವುದು ಇಷ್ಟವಾದದ್ದು.

ನಿಜವಾಗಿ ಶ್ರೀ ಸ್ವಾಮಿ ವಿವೇಕಾನಂದರ ಎಲ್ಲ ಗ್ರಂಥಗಳು ಕನ್ನಡಿಸ ಲ್ಪಟ್ಟರೆ ಬಹಳ ಉಪಕಾರಕವಾಗುವುದು. ಆದರೆ ಅಷ್ಟೆಲ್ಲ ಆಗುವ ವರೆಗೆ ಈಗ ಕನ್ನಡಿಸಲ್ಪಟ್ಟ ವಿವೇಕಾನಂದರ ಗ್ರಂಥಗಳನ್ನು ಚನ್ನಾಗಿ ಓದಿ ಅವುಗಳ ಉಪಯೋಗವನ್ನು ಮಾಡಿಕೊಳ್ಳುವುದು ಕನ್ನಡಿಗರ ಕರ್ತವ್ಯವಿರುವುದು.

ರಂಗನಾಥ ದಿವಾಕರ

# ಕರ್ಮಯೋಗ

## ಕರ್ಮದಿಂದ ಸ್ವಭಾವಗುಣದ ಮೇಲೆ ಆಗುವ ಪರಿಣಾಮ

ಕರ್ಮ ಶಬ್ದವು ಕೃ ಎಂದರೆ ಮಾಡು ಎಂಬ ಮೂಲ ಸಂಸ್ಕೃತ ಧಾತು ವಿನಿಂದ ಉತ್ಪನ್ನವಾಗಿದೆ. ಮಾಡುವುದೆಲ್ಲವೂ ಕರ್ಮವೆ. ಕೃತಿಗಳ ಪರಿಣಾಮಗಳಿಗೂ ಕರ್ಮವೆಂದೆನ್ನುವ ಪರಿಪಾಠವುಂಟು. ಪೂರ್ವಜನ್ಮದಲ್ಲಿ ಮಾಡಿದ ಕರ್ಮದಿಂದುಂಟಾದ ಪರಿಣಾಮಗಳಿಗೂ ವೇದಾಂತ ಪರಿಭಾಷೆಯಲ್ಲಿ ಕರ್ಮವೆಂದೆನ್ನುವುದುಂಟು. ಆದರೆ ಈ 'ಕರ್ಮಯೋಗ'ದಲ್ಲಿ ಕರ್ಮವೆಂದರೆ ಕ್ರಿಯಾ ಎಂಬರ್ಥವನ್ನೇ ಮಾಡಬೇಕು. ಬ್ರಹ್ಮಜ್ಞಾನವೇ ಮಾನವನ ಅಂತಿಮ ಧ್ಯೇಯ, ಕಡೆಯ ಗುರಿ. ಒಂದೇ ಉಚ್ಚ ಆದರ್ಶವನ್ನು ಪೌರ್ವಾತ್ಯ ತತ್ವಶಾಸ್ತ್ರವು ನಮ್ಮೆದುರಿಗೆ ನಿಚ್ಚಳವಾಗಿಟ್ಟಿರುತ್ತದೆ. ವಿಷಯಸುಖವು ಮನುಷ್ಯನ ಅಂತಿಮ ಧ್ಯೇಯವಲ್ಲ. ಜ್ಞಾನವೇ ನಮ್ಮ ಕೊನೆಯ ಮೆಟ್ಟಲು. ದೇಹಸುಖವೂ ವಿಷಯಾನಂದವೂ ಕೊನೆಗೆ ನಾಶಹೊಂದುವವು. ವಿಷಯಸುಖವು ನಮ್ಮ ಕಟ್ಟಕಡೆಯ ಗುರಿಯೆಂದು ತಿಳಿದುಕೊಳ್ಳುವುದು ತಪ್ಪು. ವಿಷಯಸುಖವನ್ನೇ ನಮ್ಮ ಅಂತಿಮ ಸಾಧನವನ್ನಾಗಿಟ್ಟುಕೊಂಡು ಅದಕ್ಕಾಗಿಯೇ ನಾವು ಸಾಹಸಪಡಬೇಕೆಂದು ಮೂರ್ಖತನದಿಂದ ತಿಳಿದುಕೊಳ್ಳುವುದೇ ಪ್ರಪಂಚದೊಳಗಿನ ಎಲ್ಲ ದುಃಖಗಳಿಗೂ ಕಾರಣವಾಗಿದೆ. ಕೆಲವು ಕಾಲದ ಮೇಲೆ ಮನುಷ್ಯನು ತನಗೆ ಬೇಕಾದದ್ದು ವಿಷಯಸುಖವಲ್ಲವೆಂದೂ ತಾನು ನಿಜವಾಗಿ ಅಪೇಕ್ಷಿಸಿಸಾಗಿದ್ದು ಬ್ರಹ್ಮಜ್ಞಾನದ ಕಡೆಗೆಂದೂ ಅರಿತುಕೊಳ್ಳುತ್ತಾನೆ. ಸುಖದುಃಖಗಳೆರಡೂ ತನಗೆ ಬುದ್ಧಿವಾದವನ್ನು ಹೇಳಿದ ಗುರುಗಳೆಂದೂ ಒಳಿತುಗಳಿಂದ ಕಲಿತಷ್ಟು ಬುದ್ಧಿಯನ್ನು ಕೆಡುಕುಗಳಿಂದಲೂ ಕಲಿಯಬಹುದೆಂದೂ ಅವನಿಗೆ ಹೊಳೆಯುವುದು. ಸುಖದುಃಖಗಳೆರಡೂ ಜೀವಾತ್ಮನ ಎದುರಿನಲ್ಲಿ ಹಾಯ್ದು ಹೋಗುವಾಗ ಅವನ ಮೇಲೆ ಭಿನ್ನ ಸಂಸ್ಕಾರಗಳನ್ನುಂಟುಮಾಡುತ್ತವೆ.

ಈ ಎಲ್ಲ ಸಂಸ್ಕಾರಗಳ ಒಟ್ಟುಗೂಡಿದ ಪರಿಣಾಮವೇ ಮನುಷ್ಯನ ಸ್ವಭಾವ ಗುಣವೆನಿಸುವುದು. ಮನುಷ್ಯನ ಸ್ವಭಾವಗುಣವೆಂದರೆ ನಿಜವಾಗಿ ಅವನ ವಾಸನೆಗಳ ಸಮುದಾಯವೆಂದೂ, ಅವನ ಮನಸ್ಸಿನ ಒಲವುಗಳ—'ಬೇಕು ಬೇಡ'ಗಳ—ಏಕೀಕರಣವೆಂದೂ ಹೇಳಬಹುದು. ಈ ಸ್ವಭಾವಗುಣ ಗಳನ್ನು ಸಿದ್ಧಗೊಳಿಸುವ ಕಾರ್ಯದಲ್ಲಿ ಸುಖದುಃಖಗಳೆರಡೂ ಅಷ್ಟೇ ಪರಿ ಣಾಮಕಾರಿಯಾಗಿರುತ್ತವೆಂದು ಕಂಡುಬರುತ್ತದೆ. ಒಳಿತು ಕೆಡುಕುಗಳೆ ರಡೂ ಸ್ವಭಾವಗುಣವನ್ನು ರಚಿಸುವ ಕಾರ್ಯದಲ್ಲಿ ಅಷ್ಟೇ ಶ್ರಮವನ್ನು ವಹಿಸುತ್ತವೆ. ಕೆಲಕೆಲವು ಸಂದರ್ಭಗಳಲ್ಲಿ ಸುಖಕ್ಕಿಂತ ದುಃಖವೇ ಹೆಚ್ಚು ಬುದ್ಧಿಗಲಿಸುತ್ತದೆ. ಜಗತ್ತಿನಲ್ಲಿ ಜನ್ಮವೆತ್ತಿದ ದೊಡ್ಡ ದೊಡ್ಡ ವಿಭೂತಿಗಳ ಗುಣಪರೀಕ್ಷೆ ಮಾಡಿ ನೋಡಿದರೆ, ಅನೇಕ ಸಲ ಸುಖಕ್ಕಿಂತ ದುಃಖವೇ ಹೆಚ್ಚು ಬೋಧಪ್ರದವಾಯಿತೆಂದೂ ಸಂಪತ್ತಿಗಿಂತ ಬಡತನವೇ ಹೆಚ್ಚು ಮಾರ್ಗದರ್ಶಕವೆಂದೂ ಪರರಿಂದ ಬಂದ ಹೊಗಳಿಕೆಗಿಂತ ತೆಗಳಿಕೆಯ ಏಟುಗಳೇ ಅಂತರ್ಗತ ಜ್ಯೋತಿಯನ್ನು ಹೊರಚಿಮ್ಮಿದವೆಂದೂ ಧೈರ್ಯ ದಿಂದ ಹೇಳಬಹುದು.

ಈ ಜ್ಞಾನವು ಮನುಷ್ಯನಲ್ಲಿ ಇದ್ದೇ ಇರುತ್ತದೆ. ಯಾವ ಜ್ಞಾನವೂ ಹೊಸದಾಗಿ ಹೊರಗಿನಿಂದ ಬರಬೇಕಾಗಿಲ್ಲ. ಅದೆಲ್ಲ ಒಳಗೆ ಇದ್ದದ್ದೇ. 'ಇಂಥ ಮನುಷ್ಯನು ಇಂತಹದನ್ನು ತಿಳಿದುಕೊಂಡನು' ಎಂದು ನಾವು ಸಾಮಾನ್ಯ ಭಾಷೆಯಲ್ಲಿ ಹೇಳುತ್ತೇವೆ. ಅದನ್ನೇ ಮಾನಸಶಾಸ್ತ್ರದ ಪರಿ ಭಾಷೆಯಲ್ಲಿ ಹೇಳುವುದಾದರೆ 'ಇಂಥ ಮನುಷ್ಯನು ಇಂತಹದನ್ನು ವ್ಯಕ್ತ ಮಾಡಿದನು, ಶೋಧ ಮಾಡಿದನು, ಬೈಲಿಗಿಟ್ಟನು, ಅದರ ಮೇಲುಹೊದಿಕೆ ಯನ್ನು ತೆಗೆದನು' ಎಂದು ಹೇಳಬೇಕು. ಮನುಷ್ಯನು 'ತಿಳಿದುಕೊಳ್ಳು ತ್ತಾನೆ'ಂಬುದನ್ನು ಅವನು ನಿಜವಾಗಿ 'ಹುಡುಕಿ ತೆಗೆಯುತ್ತಾನೆ.' ಅನಂತವೂ ಅಪಾರವೂ ಆದ ಜ್ಞಾನದ ಖಣಿಯಾದ ತನ್ನ ಆತ್ಮದ ಮೇಲೆ ಮುಚ್ಚಿದ್ದ ಮುಸುಕನ್ನು ತೆಗೆದು ಬಿಸುಡುವುದೇ ಜ್ಞಾನವನ್ನು ಸಂಪಾದಿ ಸುವುದು ಎಂಬರ್ಥವನ್ನು ಹೊಂದುತ್ತದೆ. ನ್ಯೂಟನ್ನನು ಗುರುತ್ವಾಕರ್ಷಣದ ನಿಯಮವನ್ನು ಹುಡುಕಿ ತೆಗೆದನೆಂದು ನಾವು ಹೇಳುತ್ತೇವೆ. ಇದರ ಅರ್ಥ ವೇನು? ಈ ನಿಯಮವು ಜಗತ್ತಿನೊಳಗಿನ ಯಾವುದಾದರೊಂದು ಮೂಲೆ ಯಲ್ಲಿ ಅಡಗಿಕೊಂಡು ಕುಳಿತು, ಇವನು ಬಂದು ಶೋಧಮಾಡಲೆಂದು

ನಿರೀಕ್ಷಣೆ ಮಾಡುತ್ತಿತ್ತೋ? ಅದು ಅವನ ಮನಸ್ಸಿನಲ್ಲಿಯೇ ಇತ್ತು. ಅದರ ವೇಳೆಯು ಬಂದ ಕೂಡಲೆ ಅವನು ಅದನ್ನು ಹೊರಗೆಡಹಿದನು. ಜಗತ್ತಿನಲ್ಲಿ ಪ್ರಕಟವಾದ ಜ್ಞಾನವೆಲ್ಲವೂ ಮೊದಲು ಮನಸ್ಸಿನಲ್ಲಿಯೇ ಅಡಗಿಕೊಂಡಿತ್ತು. ವಿಶ್ವದಲ್ಲಿ ಹಿಡಿಸಲಾರದಷ್ಟು ದೊಡ್ಡ ಗ್ರಂಥ ಸಂಗ್ರಹವು ನಿಮ್ಮ ಮನಸ್ಸಿನಲ್ಲಿಯೇ ಅವಿತುಕೊಂಡಿದೆ. ನಿಮ್ಮ ಮನಸ್ಸಿನೊಳಗೆ ನೀವು ಹೊಕ್ಕು ಮನಸ್ಸನ್ನು ಶೋಧಿಸಹಚ್ಚುವುದಕ್ಕೆ ಹೊರಗಿನ ಜಗತ್ತು ಕೇವಲ ನೆಪಮಾತ್ರವಾಗಿರುತ್ತದೆ; ಸೂಚನೆಯನ್ನು ಮಾತ್ರ ಕೊಡುತ್ತದೆ; ಪ್ರಸಂಗವನ್ನು ಒದಗಿಸಿಕೊಡುತ್ತದೆ. ಆದರೆ ನೀವು ಪರೀಕ್ಷಿಸುವ ವಸ್ತು ಮಾತ್ರ ನಿಮ್ಮ ಮನಸ್ಸೇ ಎಂಬುದನ್ನು ಮರೆಯಬಾರದು. ಹಣ್ಣು ಕೆಳಗೆ ಬೀಳುವುದರಿಂದ ನ್ಯೂಟನ್ನನಿಗೆ ಸೂಚನೆ ಮಾತ್ರ ಸಿಕ್ಕಿತು. ಅವನು ತನ್ನ ಮನಸ್ಸನ್ನೇ ಪರೀಕ್ಷಿಸಿ ನೋಡಿದನು. ಅವನು ತನ್ನ ಮನಸ್ಸಿನಲ್ಲಿಯ ವಿಚಾರಗಳ ಪೂರ್ವಾಪರ ಸಂಬಂಧವನ್ನು ಪುನಃ ವ್ಯವಸ್ಥಿತಗೊಳಿಸಿಕೊಂಡನು; ಮತ್ತು ಅವುಗಳಲ್ಲಿಯ ಗುರುತ್ವಾಕರ್ಷಣವೆಂಬ ಹೊಸ ಸಂಬಂಧವನ್ನು ಹುಡುಕಿ ತೆಗೆದನು. ಅದು ಹಣ್ಣಿನಲ್ಲಿಯಾಗಲಿ ಭೂಗರ್ಭದಲ್ಲಿಯ ಯಾವುದೊಂದು ಪದಾರ್ಥದಲ್ಲಿಯಾಗಲಿ ಇದ್ದಿಲ್ಲ. ಆದ್ದರಿಂದ ಐಹಿಕ ಜ್ಞಾನವೇ ಆಗಲಿ, ಪಾರಲೌಕಿಕ ಜ್ಞಾನವೇ ಆಗಲಿ, ಎಲ್ಲವೂ ಮನುಷ್ಯನ ಮನಸ್ಸಿನಲ್ಲಿಯೇ ಇರುತ್ತದೆ. ಅನೇಕ ಸಂದರ್ಭಗಳಲ್ಲಿ ಅದರ ಶೋಧವಾಗದೆ ಮುಚ್ಚಿಕೊಂಡಿರುತ್ತದೆ. ಮೇಲಿನ ಹೊದಿಕೆ ಮೆಲ್ಲಮೆಲ್ಲನೆ ದೂರವಾಗುತ್ತ ಹೋದ ಹಾಗೆ ನಾವು ಹೆಚ್ಚು ಹೆಚ್ಚು ಜ್ಞಾನವಂತರಾದೆವೆಂದು ಹೇಳುತ್ತೇವೆ. ಈ ಅನಾವರಣಕ್ರಿಯೆ ಮುಂದುವರಿದಂತೆ ಜ್ಞಾನಾರ್ಜನೆಯ ಕ್ರಿಯೆಯೂ ಮುಂದುವರಿದಂತೆಯೇ! ಯಾವ ಮನುಷ್ಯನ ಜ್ಞಾನದ ಮೇಲಿನ ಹೊದಿಕೆ ಹೆಚ್ಚು ದೂರಕ್ಕೆ ಸರಿದಿರುವುದೋ ಅವನು ಹೆಚ್ಚು ಜ್ಞಾನಿ. ಯಾವನ ಮೇಲುಹೊದಿಕೆ ಇನ್ನೂ ದಪ್ಪವಾಗಿರುವುದೋ ಅವನೇ ಅಜ್ಞಾನಿ. ಯಾರ ಹೃದಯದ ಮೇಲಿನ ಈ ಮುಸುಕು ಸಂಪೂರ್ಣವಾಗಿ ಕೆಳಗೆ ಕಳಚಿಬಿದ್ದಿರುವುದೋ ಅವನು ಸಂಪೂರ್ಣ ಜ್ಞಾನಿ, ಸರ್ವಜ್ಞ. ಹಿಂದಕ್ಕೆಷ್ಟೋ ಮಂದಿ ಸರ್ವಜ್ಞರು ಆಗಿಹೋಗಿರುವರು; ಇನ್ನು ಮುಂದಾದರೂ ಆಗುವರೆಂದು ನಂಬುತ್ತೇನೆ. ಮುಂದಿನ ಯುಗಗಳಲ್ಲಿ ಸಾವಿರಾರು ಮಂದಿ ಸರ್ವಜ್ಞರು ಜನ್ಮವೆತ್ತುವರು. ಕಟ್ಟಿಗೆಯ ತುಂಡಿನಲ್ಲಿ

ಅಗ್ನಿಯು ಗುಪ್ತವಾಗಿರುವಂತೆ ಮಾನವೀ ಹೃದಯದಲ್ಲಿ ಜ್ಞಾನವು ಅಡಗಿ ಕೊಂಡಿರುತ್ತದೆ. ಯಾವುದಾದರೊಂದು ಕಾರಣದಿಂದ ಘರ್ಷಣವಾಗಿ ಅದು ಹೊರಬರುತ್ತದೆ. ಇದೇ ಪ್ರಕಾರ ನಮ್ಮ ಎಲ್ಲ ಭಾವನೆಗಳೂ ಎಲ್ಲ ಕ್ರಿಯೆಗಳೂ—ಅಳುವುದು, ನಗುವುದು, ಸುಖದುಃಖಗಳು, ಶಾಪಾನು ಗ್ರಹಗಳು, ನಿಂದಾಸ್ತುತಿಗಳು ಇವೆಲ್ಲವೂ— ನಮ್ಮ ಅಂತರಂಗದಿಂದಲೇ ಹೊರಬೀಳುವವು. ಸಂಸಾರದೊಳಗಿನ ಅನೇಕ ಪೆಟ್ಟುಗಳಿಂದ ಅವು ದೃಶ್ಯ ರೂಪವನ್ನು ಹೊಂದುವವೆಂಬುದು, ನಮ್ಮೊಳಗೆ ನಾವು ಶಾಂತಚಿತ್ತದಿಂದ ಚನ್ನಾಗಿ ಯೋಚಿಸಿ ನೋಡಿದರೆ ತಿಳಿಯದೆ ಇರಲಾರದು. ಇವೆಲ್ಲವುಗಳ ಪರಿಣಾಮವೆಂದರೆ ನಮ್ಮ ಸ್ವಭಾವಗುಣ. ಇವೆಲ್ಲ ಆಘಾತಗಳ ಸಮು ದಾಯಕ್ಕೆ ಕರ್ಮವೆಂದೆನ್ನುವರು. ಜೀವಾತ್ಮನಿಗೆ ತಾಕಿದ ಪ್ರತಿಯೊಂದು ಪೆಟ್ಟು— ಅದು ಮಾನಸಿಕವೇ ಇರಲಿ, ಶಾರೀರಕವೇ ಇರಲಿ—ಅದರಲ್ಲಿಯ ಅಂತರ್ಜ್ಯೋತಿಯನ್ನು ಹೊರಗೆಡಹುತ್ತದೆ. ಜೀವಾತ್ಮನು ದಿವ್ಯ ಸಾಮ ರ್ಥ್ಯವೂ ಜ್ಞಾನಭಂಡಾರವೂ ದೃಗ್ಗೋಚರವಾಗುವಂತೆ ಮಾಡುತ್ತಾನೆ. ಈ ಪೆಟ್ಟುಗಳಿಗೇ ಕರ್ಮವೆನ್ನುವರು. 'ಕರ್ಮ'ಕ್ಕೆ ಈ ಸರ್ವಸಾಮಾನ್ಯ ಅರ್ಥವನ್ನು ಮಾಡಿದರೆ ನಾವೆಲ್ಲರೂ ಯಾವಾಗಲೂ ಇಂಥ ಕರ್ಮಗಳನ್ನು ಮಾಡುತ್ತಲೇ ಇರುತ್ತೇವೆನ್ನಬಹುದು. ನಾನು ಮಾತಾಡುವುದೊಂದು ಕರ್ಮ; ನೀವು ಕೇಳುವುದೊಂದು ಕರ್ಮ. ಉಸಿರಾಡಿಸುವುದೊಂದು ಕರ್ಮ; ನಡೆದಾಡುವುದೊಂದು ಕರ್ಮ. ಮನಸ್ಸಿನಿಂದಾಗಲಿ, ದೇಹ ದಿಂದಾಗಲಿ ನಾವು ಮಾಡುವುದೆಲ್ಲವೂ ಕರ್ಮವೇ. ಅದು ನಮ್ಮ ಮೇಲೆ ತನ್ನ ಸಂಸ್ಕಾರಗಳನ್ನು ಮಾಡಿಸದೆ ಬಿಡದು.

ಒಮ್ಮೊಮ್ಮೆ ಅನೇಕ ಸಣ್ಣ ಸಣ್ಣ ಕ್ರಿಯೆಗಳು ಕೂಡಿದ ಸಮುದಾಯಕ್ಕೆ ಒಂದು ಕರ್ಮವೆಂದೆನ್ನುವೆವು. ಕಡಲ ದಂಡೆಯ ಮೇಲೆ ನಿಂತು ದಂಡೆಗೆ ಅಪ್ಪಳಿಸುವ ತೆರೆಗಳನ್ನು ಆಲಿಸಿದರೆ ಅದೊಂದು ದೊಡ್ಡ ಸಪ್ಪಳವೆಂದು ನಮಗೆ ತಿಳಿಯುತ್ತದೆ. ಆದರೂ ನಿಜವಾಗಿ ಒಂದು ತೆರೆ ಅನೇಕಾನೇಕ ಸಣ್ಣಪುಟ್ಟ ತೆರೆಗಳಿಂದ ಕೂಡಿ ಆಗಿರುತ್ತದೆ. ಈ ಪ್ರತಿಯೊಂದು ಸಣ್ಣ ತೆರೆಯೂ ತನ್ನ ಸಣ್ಣ ಸಪ್ಪಳವನ್ನು ಮಾಡುತ್ತದೆ. ಅದು ನಮಗೆ ಕೇಳ ಬರುವದಿಲ್ಲವಷ್ಟೇ. ಅವೆಲ್ಲ ಕೂಡಿ ದೊಡ್ಡದಾದ ಮೇಲೆ ನಮಗೆ ಕೇಳಿಸು ತ್ತದೆ. ಅದರಂತೆ ಹೃದಯದ ಪ್ರತಿಯೊಂದು ಸ್ಫುರಣವೂ ಒಂದೊಂದು

ಕರ್ಮ. ಕೆಲವು ಕ್ರಿಯೆಗಳು ನಮಗೆ ತಿಳಿದು ದೃಗ್ಗೋಚರವಾಗುತ್ತವೆ. ಅವು ಕೂಡ ಅನೇಕ ಸಣ್ಣ ಕ್ರಿಯೆಗಳ ಸಮುದಾಯವೇ. ಒಬ್ಬ ಮನುಷ್ಯನ ಸ್ವಭಾವವನ್ನು ನೀವು ನಿಜವಾಗಿ ಪರೀಕ್ಷಿಸಬೇಕಾಗಿದ್ದರೆ ಅವನ ಮಹ ತ್ಕಾರ್ಯಗಳನ್ನು ನೋಡಬೇಡಿ. ಒಮ್ಮೊಮ್ಮೆ ಮಹಾ ಮೂರ್ಖನು ಕೂಡ ಶೂರಧೀರನಾದಂತೆ ಕಾಣುವನು. ಮನುಷ್ಯನು ಮಾಡುವ ಸಣ್ಣ ಸಣ್ಣ ಸಾಮಾನ್ಯ ಕ್ರಿಯೆಗಳನ್ನು ನೋಡಿದರೆ ಆ ದೊಡ್ಡ ಮನುಷ್ಯನ ಸ್ವಭಾವ ಗುಣದ ನಿಜವಾದ ಪರೀಕ್ಷೆಯಾಗುವುದು. ಮಹತ್ಪ್ರಸಂಗಗಳು ಕೀಳು ಮನುಷ್ಯರನ್ನು ಕೂಡ ಒಮ್ಮೊಮ್ಮೆ ಮಹತ್ಕಾರ್ಯಗಳನ್ನು ಮಾಡಲು ಹುರಿ ದುಂಬಿಸುತ್ತವೆ. ಆದರೆ ಯಾವನ ಸ್ವಭಾವಗುಣವು ಯಾವಾಗಲೂ ದೊಡ್ಡ ದಾಗಿಯೇ, ಎಂಥ ಪರಿಸ್ಥಿತಿಯಲ್ಲಿಯೂ ಉದಾತ್ತವಾಗಿಯೇ ಉಳಿಯು ವುದೋ, ಅವನೇ ದೊಡ್ಡವನು.

ಮನುಷ್ಯನ ಸ್ವಭಾವಗುಣವನ್ನು ರಚಿಸುವ ಕಾರ್ಯದಲ್ಲಿ ಕರ್ಮವು ಮಹಾ ಪ್ರಬಲವಾದ ಸಾಮರ್ಥ್ಯವನ್ನು ತೋರ್ಪಡಿಸುತ್ತದೆಂಬುದನ್ನು ನಾವು ಚನ್ನಾಗಿ ಅರಿತಿರಬೇಕು. ಮನುಷ್ಯನು ಮಧ್ಯದಲ್ಲಿ ನಿಂತುಕೊಂಡು ವಿಶ್ವದೊಳಗಿನ ಸರ್ವಶಕ್ತಿಗಳನ್ನೆಲ್ಲ ತನ್ನೆಡೆಗೆ ಆಕರ್ಷಿಸಿ ಅವುಗಳನ್ನೆಲ್ಲ ಒಟ್ಟುಗೂಡಿಸಿ ಏಕಜೀವಮಾಡಿ ಅದರ ಒಂದು ಮಹಾ ಪ್ರವಾಹವನ್ನುಂಟು ಮಾಡಿ ಪುನಃ ವಿಶ್ವದೊಳಗೆ ನೂಕಿಸಿಬಿಡುತ್ತಾನೆ. ಈ ಮಧ್ಯವರ್ತಿ ಪುರುಷನೇ ನಿಜವಾದ ಮನುಷ್ಯ, ಸರ್ವಶಕ್ತಿವಂತ, ಸರ್ವಜ್ಞ. ಅವನು ಸರ್ವ ಜಗತ್ತನ್ನೇ ತನ್ನೆಡೆಗೆ ಎಳೆದುಕೊಳ್ಳುತ್ತಾನೆ. ಒಳಿತು ಕೆಡುಕು ಸುಖ ದುಃಖಗಳೆಲ್ಲವೂ ಅವನ ಕಡೆಗೆ ಓಡಿ ಹೋಗಿ ಅವನನ್ನು ಅಂಟಿಕೊಳ್ಳುತ್ತವೆ. ಅವುಗಳನ್ನೆಲ್ಲ ಮನುಷ್ಯನು ಸ್ವೀಕರಿಸಿ ಅವುಗಳಿಂದಲೇ ಸ್ವಭಾವಗುಣವೆಂಬ ವಾಸನಾರೂಪೀ ಮಹಾಪ್ರವಾಹವನ್ನು ನಿರ್ಮಾಣ ಮಾಡಿ ಬಾಹ್ಯ ಜಗತ್ತಿ ನಲ್ಲಿ ಪುನಃ ಹರಡಿಬಿಡುತ್ತಾನೆ. ಮನುಷ್ಯನಿಗೆ ಒಳಗೆ ಎಳೆದುಕೊಳ್ಳುವ ಸಾಮರ್ಥ್ಯವಿದ್ದಂತೆ ಹೊರಗೆ ಹಾಕುವ ಶಕ್ತಿಯೂ ಇರುತ್ತದೆ.

ಲೋಕದೊಳಗಿನ ನಾವು ಕಾಣುವ ಕಾರ್ಯಗಳೆಲ್ಲವೂ, ಮಾನವೀ ಸಮಾಜದಲ್ಲಿ ನಡೆದ ಚಲನವಲನಗಳೆಲ್ಲವೂ, ನಮ್ಮ ಸುತ್ತಲು ನಡೆದ ಕ್ರಿಯೆಗಳೆಲ್ಲವೂ ಮನುಷ್ಯಪ್ರಾಣಿಯ ವಿಚಾರಶಕ್ತಿಯ ಮತ್ತು ಇಚ್ಛಾ ಶಕ್ತಿಯ ಪ್ರಾದುರ್ಭಾವವು, ಬಹಿರಂಗರೂಪವು ಎಂದು ಹೇಳಬೇಕು.

ಯಂತ್ರ, ಉಪಕರಣ, ಪಟ್ಟಣ, ಹಡಗು, ಕಾರಖಾನೆ ಮೊದಲಾದವೆಲ್ಲ ಮನುಷ್ಯನ ಇಚ್ಛಾತಕ್ತಿಯ ದೃಶ್ಯ ಫಲಗಳು. ಈ ಇಚ್ಛಾಶಕ್ತಿ ಸ್ವಭಾವ ಗುಣದಿಂದ ಉಂಟಾಗುತ್ತದೆ; ಸ್ವಭಾವಗುಣವು ಕರ್ಮದಿಂದ ನಿರ್ಮಾಣ ವಾಗುತ್ತದೆ. ಮಾಡಿದ ಕರ್ಮಕ್ಕೆ ತಕ್ಕಂತೆ ಇಚ್ಛಾಶಕ್ತಿಯ ದೃಶ್ಯ ಫಲವು ದೊರೆಯುವುದು. ಪ್ರಪಂಚದಲ್ಲಿ ಬಾಳಿಹೋದ ಮಹಾ ಪ್ರಬಲವಾದ ಇಚ್ಛಾಶಕ್ತಿಯುಳ್ಳ ಮಹಾ ಪುರುಷರೆಲ್ಲರೂ ಮಹಾ ಕಾರ್ಯಕರ್ತರಿದ್ದರು. ಇಡೀ ಜಗತ್ತನ್ನೇ ಬುಡಮೇಲು ಮಾಡುವಷ್ಟು ಸಾಮರ್ಥ್ಯವುಳ್ಳ ಮಹಾ ಪ್ರಬಲವಾದ ಇಚ್ಛಾಶಕ್ತಿಯುಳ್ಳ ಅದ್ಭುತ ಪುರುಷರಿದ್ದರವರು. ಈ ಪ್ರಚಂಡ ಇಚ್ಛಾಶಕ್ತಿಯನ್ನು ಅವರು ಅನೇಕ ಯುಗ ಯುಗಾಂತರಗಳಲ್ಲಿ ಕಷ್ಟಪಟ್ಟು ಸಾಹಸಮಾಡಿ ಗಳಿಸಿದರು. ಬುದ್ಧ ಅಥವಾ ಯೇಸೂಕ್ರಿಸ್ತನಂಥ ಅದ್ಭುತ ಇಚ್ಛಾಶಕ್ತಿಯುಳ್ಳ ಪುರುಷರು ಒಂದೇ ಜನ್ಮದಲ್ಲಿ ಸಿದ್ಧರಾಗಲಿಲ್ಲ. ಅದು ತಂದೆಯಿಂದ ಇಳಿದುಬಂದ ಆನುವಂಶಿಕ ಗುಣವೆಂದು ಹೇಳಿದರೆ ಯುಕ್ತ ವಾಗಲಾರದು. ಅವರ ತಂದೆಗಳು ಎಂಥವರಿದ್ದರೆಂಬುದು ನಮಗೆ ಗೊತ್ತುಂಟು. ಅವರು ಮಾನವೀ ಸಮಾಜದ ಕಲ್ಯಾಣಕ್ಕಾಗಿ ಒಂದು ಶಬ್ದವನ್ನಾದರೂ ಉಚ್ಚರಿಸಿದರೆಂದು ಯಾರೂ ಹೇಳಲಾರರು. ಜೊಸೆಫ ನಂಥ ಸಾವಿರಾರು ಮಂದಿ ಸಾಧಾರಣ ಬಡಿಗರು ಆಗಿ ಹೋದರು, ಈಗಲೂ ಇರುವರು. ಬುದ್ಧನ ತಂದೆಯಂಥ ಸಣ್ಣಪುಟ್ಟ ಅರಸರು ಸಾವಿ ರಾರು ಮಂದಿ ಆಗಿ ಹೋದರು. ಇದು ಕೇವಲ ಆನುವಂಶಿಕ ಸಂಪಾ ದನೆಯ ವಿಷಯವಾಗಿದ್ದರೆ, ಯಾರಿಗೆ ತನ್ನ ಸೇವಕರೇ ವಿಧೇಯರಾಗಿ ಇದ್ದರೊ ಇಲ್ಲವೋ ಅಂಥ ಒಬ್ಬ ಕ್ಷುದ್ರ ಅರಸನ ಹೊಟ್ಟೆಯಲ್ಲಿ ಇಡೀ ಅರ್ಧ ಜಗತ್ತಿಗೇ ಪೂಜ್ಯನಾದಂಥ ಮಗನು ಹೇಗೆ ಹುಟ್ಟುತ್ತಿದ್ದನು? ಸರ್ವ ಸಾಮಾನ್ಯನಾದ ಆ ಬಡಿಗ ಮತ್ತು ಲಕ್ಷಾವಧಿ ಜನರಿಂದ ದೇವರೆಂದು ಪೂಜೆಗೊಳ್ಳುವ ಅವನ ಮಗ, ಇವರೀರ್ವರಲ್ಲಿರುವ ಮಹದಂತರದ ಅರ್ಥ ವೇನು? ಆನುವಂಶಿಕ ಸಂಸ್ಕಾರದ ಪರಿಣಾಮವೆಂದು ಹೇಳಿದರೆ ಆಗ ಲಾರದು. ಬುದ್ಧ ಮತ್ತು ಯೇಸುಕ್ರಿಸ್ತರಲ್ಲಿ ಜಗತ್ತಿನ ಮೇಲೆಲ್ಲ ಹರಡಿದ ಅದ್ಭುತ ಇಚ್ಛಾಶಕ್ತಿ ಎಲ್ಲಿಂದ ಬಂತು? ಈ ಶಕ್ತಿಸಂಗ್ರಹವು ಎಲ್ಲಿಯದು? ಅದು ಕಾಲಕಾಲಕ್ಕೆ ಯುಗಯುಗಾಂತರಗಳಲ್ಲಿ ಕ್ರಮೇಣ ಬೆಳೆದು ಒಂದೇ ಸಮನೆ ದೊಡ್ಡ ದೊಡ್ಡ ಪ್ರವಾಹವಾಗಿ ಬಲಿಯುತ್ತ ನಡೆದು ಕೊನೆಗೆ

ಬುದ್ಧ ಅಥವಾ ಯೇಸೂಕ್ರಿಸ್ತರ ರೂಪದಿಂದ ಸಮಾಜದ ಮೇಲೆ ಅಪ್ಪಳಿಸಿ ಇಂದಿಗೂ ಹಾಗೇ ಮುಂದಕ್ಕೆ ಉರುಳುತ್ತ ಸಾಗಿದೆ.

ನಮ್ಮ ಸ್ವಭಾವಗುಣವು, ನಮ್ಮ ಶಕ್ತಿ ಸಾಮರ್ಥ್ಯಗಳು ನಮ್ಮ ಪೂರ್ವ ಕರ್ಮದ ದೃಶ್ಯ ಫಲಗಳು. ಕಷ್ಟಪಟ್ಟು ಗಳಿಸಿದ ಹೊರತು ಯಾವುದೂ ಅನಾಯಾಸವಾಗಿ ದೊರಕುವುದಿಲ್ಲವೆಂಬುದು ಅನಾದಿಸಿದ್ಧವಾದ ನಿಯಮ. ಇಂಥ ನಿಯಮವೇನೂ ಇಲ್ಲವೆಂದು ನಾವು ಒಮ್ಮೊಮ್ಮೆ ತಿಳಿದುಕೊಳ್ಳ ಬಹುದು. ಆದರೆ ಕೊನೆಗೆ ಅದರ ಸತ್ಯತೆಯು ನಮಗೆ ಹೊಳೆಯದೆ ಹೋಗಲಾರದು. ಮನುಷ್ಯನು ದ್ರವ್ಯ ಸಂಪಾದನೆಗಾಗಿ ತನ್ನ ಇಡೀ ಆಯುಷ್ಯದಲ್ಲೆಲ್ಲ ಸಾಹಸಪಡಬಹುದು; ಸಾವಿರಾರು ಜನರನ್ನು ಮೋಸ ಪಡಿಸಬಹುದು; ಆದರೆ ತಾನು ಧನವಂತನಾಗಲಿಕ್ಕೆ ಅರ್ಹನಿದ್ದಿಲ್ಲವೆಂದು ಅವನಿಗೆ ಕೊನೆಗೆ ಹೊಳೆಯುತ್ತದೆ. ಅವನ ಜೀವನವೇ ಅವನಿಗೆ ಭಾರವಾಗಿ ಬೇಸರವಾಗುತ್ತದೆ. ದೇಹಸುಖಕ್ಕಾಗಿ ನಾವು ತರತರದ ಸೌಕರ್ಯಗಳನ್ನು ಸಂಗ್ರಹಿಸಿಟ್ಟರೂ ನಾವು ಕಷ್ಟಪಟ್ಟು ಗಳಿಸಿದ್ದು ಮಾತ್ರ ನಿಜವಾಗಿ ನಮ್ಮದು. ಅದಷ್ಟೇ ನಮಗೆ ಲಭ್ಯವಾಗುವುದು; ಅದಷ್ಟೇ ನಮಗೆ ದಕ್ಕುವುದು. ಮೂರ್ಖನು ಜಗತ್ತಿನೊಳಗಿನ ಎಲ್ಲ ಗ್ರಂಥಗಳನ್ನು ಕೊಂಡು ತನ್ನ ಗ್ರಂಥ ಭಂಡಾರದಲ್ಲಿ ಸಂಗ್ರಹಿಸಿಡಬಹುದು. ಆದರೆ ಅವನಿಗೆ ಪಾತ್ರತೆಯಿದ್ದ ಗ್ರಂಥಗಳನ್ನಷ್ಟೇ ಅವನು ಓದಬಲ್ಲನು. ಈ ಪಾತ್ರತೆಯು ಕರ್ಮದಿಂದ ಪ್ರಾಪ್ತವಾಗುತ್ತದೆ. ಯಾವುದಕ್ಕೆ ನಾವು ಪಾತ್ರರಿದ್ದೇವೆ, ಯಾವುದನ್ನು ನಾವು ಜೀರ್ಣಿಸಿಕೊಳ್ಳಬಲ್ಲೆವು ಎಂಬುದನ್ನು ನಿರ್ಣಯಿಸುವುದೇ ನಮ್ಮ ಕರ್ಮವು. ನಮ್ಮ ಸ್ಥಿತಿಗೆ ನಾವೇ ಕಾರಣರು. ನಾವು ಯಾವ ಸ್ಥಿತಿಯನ್ನು ಹೊಂದಬಯಸುತ್ತೇವೋ ಅದನ್ನು ಸಂಪಾದಿಸುವ ಸಾಮರ್ಥ್ಯವು ನಮ್ಮ ಲ್ಲಿಯೇ ಇದೆ. ಈಗಿನ ನಮ್ಮ ಸ್ಥಿತಿಯು ನಮ್ಮ ಸ್ವಂತ ಪೂರ್ವಕರ್ಮಗಳ ಫಲವಾಗಿದ್ದುದರಿಂದ, ನಮ್ಮ ಈಗಿನ ಕರ್ಮಗಳು ಮುಂದಿನ ಸ್ಥಿತಿಯ ನಿರ್ಮಾಣಕ್ಕೆ ಕಾರಣವಾಗುತ್ತವೆ. ಆದ್ದರಿಂದ ಈಗ ನಾವು ಹೇಗೆ ಆಚರಿಸ ಬೇಕೆಂಬುದನ್ನು ತಿಳಿದುಕೊಳ್ಳುವುದು ಅವಶ್ಯವಿದೆ. ಕಾರ್ಯವನ್ನು ಹೇಗೆ ಮಾಡಬೇಕೆಂಬುದನ್ನು ತಿಳಿದುಕೊಂಡು ಏನು ಉಪಯೋಗ? 'ಪ್ರತಿ ಯೊಬ್ಬನೂ ಈ ಜಗತ್ತಿನಲ್ಲಿ ಒಂದಿಲ್ಲೊಂದು ರೀತಿಯಿಂದ ಕರ್ಮ ಮಾಡು ತ್ತಲೇ ಇರುವನಲ್ಲವೆ?'— ಎಂದು ಕೇಳಬಹುದು. ಆದರೆ ನಮ್ಮ ಶಕ್ತಿ

ಸರ್ವಸ್ವವನ್ನು ವ್ಯರ್ಥವಾಗಿ ಹಾಳುಮಾಡಿಕೊಳ್ಳುವ ಸಂಭವವಿದೆ. ‘ ಸಶಾಸ್ತ್ರವಾಗಿಯೂ ಕೌಶಲ್ಯದಿಂದಲೂ ಮಾಡಿದ ಕರ್ಮವು ಕರ್ಮಯೋಗವೆನಿಸುವುದೆ’ಂದು ಗೀತೆಯಲ್ಲಿ ಹೇಳಿದೆ. ಕರ್ಮವನ್ನು ಹೇಗೆ ಮಾಡಬೇಕೆಂಬುದನ್ನು ತಿಳಿದುಕೊಂಡು ಆಚರಿಸುವುದರಿಂದ ಉತ್ತಮ ಫಲವು ದೊರೆಯುವುದು. ಕರ್ಮವೆಲ್ಲವೂ ಮೊದಲಾಗಿಯೇ ನಮ್ಮಲ್ಲಿದ್ದ ಚಿಚ್ಛಕ್ತಿಯನ್ನು ಹೊರಗೆಡಹಲಿಕ್ಕೂ, ಪ್ರಸುಪ್ತ ಆತ್ಮನನ್ನು ಎಚ್ಚರಿಸಲಿಕ್ಕೂ ಸಹಾಯಕವಾಗಿರಬೇಕೆಂಬುದನ್ನು ನಾವು ಮರೆಯಬಾರದು. ಶಕ್ತಿಯೂ ಜ್ಞಾನವೂ ಪ್ರತಿಯೊಬ್ಬ ಮನುಷ್ಯನಲ್ಲಿ ಇದ್ದೇ ಇವೆ. ವಿವಿಧವಾದ ಕರ್ಮಗಳೆಂಬುದು ಅವುಗಳನ್ನು ಹೊರಗೆಳೆಯುವುದಕ್ಕಾಗಿ, ಈ ಅದ್ಭುತ ಸಾಮರ್ಥ್ಯವನ್ನು ಹೊಡೆದೆಬ್ಬಿಸುವುದಕ್ಕಾಗಿ ಕೊಟ್ಟ ಏಟುಗಳು ಮಾತ್ರ.

ಮನುಷ್ಯನು ಬೇರೆ ಬೇರೆ ಉದ್ದೇಶಗಳಿಂದ ಕಾರ್ಯ ಮಾಡುತ್ತಾನೆ. ಉದ್ದೇಶವಿಲ್ಲದೆ ಯಾವ ಕೆಲಸವೂ ಇಲ್ಲ. ಹಲವರು ಕೀರ್ತಿಗಾಗಿ, ಕೆಲವರು ಹಣಕ್ಕಾಗಿ, ಮತ್ತೆ ಕೆಲವರು ಅಧಿಕಾರಕ್ಕಾಗಿ, ಅನೇಕರು ಸ್ವರ್ಗಕ್ಕಾಗಿ ಕರ್ಮಮಾಡುತ್ತಾರೆ. ಉಳಿದ ಕೆಲವರು ತಾವು ಸತ್ತಮೇಲೆ ತಮ್ಮ ಹೆಸರು ಉಳಿಯಬೇಕೆಂದು ಕಾರ್ಯಮಾಡುತ್ತಾರೆ. ಚೀನದೇಶದಲ್ಲಿ ಹೀಗೆಯೇ ಇದೆ. ಅಲ್ಲಿ ಸಾಯುವತನಕ ಬಿರುದು ಪದವಿಗಳು ದೊರಕುವುದಿಲ್ಲ. ನಮ್ಮ ಪದ್ಧತಿಗಿಂತಲೂ ಅದೊಂದು ರೀತಿಯಿಂದ ಒಳಿತು. ಅಲ್ಲಿ ಯಾರಾದರೂ ಒಂದು ಶ್ರೇಷ್ಠ ಕಾರ್ಯವನ್ನು ಮಾಡಿದರೆ, ಮೃತಪಟ್ಟವನ ತಂದೆಗಾಗಲಿ ಅಜ್ಜನಿಗಾಗಲಿ ಉಚ್ಚ ಬಿರುದಾವಳಿಗಳನ್ನು ದಯಪಾಲಿಸುತ್ತಾರೆ. ಕೆಲವರು ಕೇವಲ ಅದಕ್ಕಾಗಿಯೇ ಕಾರ್ಯಮಾಡುತ್ತಾರೆ. ಮಹಮ್ಮದೀಯ ಪಂಥದ ಕೆಲವು ಅನುಯಾಯಿಗಳು ತಾವು ಸತ್ತಮೇಲೆ ತಮ್ಮ ಸಲುವಾಗಿ ಜನರು ಒಂದು ದೊಡ್ಡ ಗೋರಿಯನ್ನು ಕಟ್ಟಿಸಬೇಕೆಂಬ ಆಶೆಯಿಂದ ತಮ್ಮ ಇಡೀ ಆಯುಷ್ಯದಲ್ಲೆಲ್ಲ ದುಡಿಯುತ್ತಾರೆ. ಕೆಲವು ಪಂಥಗಳಲ್ಲಿ ಮಗು ಹುಟ್ಟಿದ ಕೂಡಲೇ ಅದಕ್ಕಾಗಿ ಒಂದು ಗೋರಿಯನ್ನು ಏರ್ಪಡಿಸಿಡುತ್ತಾರೆಂಬುದು ನನಗೆ ಗೊತ್ತುಂಟು. ಅವರಲ್ಲಿ ಅದೊಂದು ಮನುಷ್ಯನು ಮಾಡಬೇಕಾದ ಮಹತ್ವದ ಕಾರ್ಯವಾಗಿದೆ. ಗೋರಿಯು ಹೆಚ್ಚು ದೊಡ್ಡದೂ ಸುಂದರವೂ ಇದ್ದಷ್ಟು ಆ ಮನುಷ್ಯನು ಸುಸ್ಥಿತಿಯಲ್ಲಿದ್ದವನೆಂದು ತಿಳಿದುಕೊಳ್ಳುತ್ತಾರೆ. ಕೆಲವರು ಪ್ರಾಯಶ್ಚಿತ್ತವೆಂದು ಕಾರ್ಯ ಮಾಡುತ್ತಾರೆ.

ಅವರು ಬೇಕುಬೇಕಾದ ಕೆಟ್ಟ ಕೆಲಸಗಳನ್ನು ಮಾಡಿ ಅವುಗಳ ಪಾಪ ನಿವಾರಣಾರ್ಥವಾಗಿ ದೇವಾಲಯವನ್ನಾದರೂ ಕಟ್ಟಿಸುತ್ತಾರೆ; ಅಥವಾ ಬ್ರಾಹ್ಮಣರಿಗೆ ದಕ್ಷಿಣೆಯೆಂಬ ಲಂಚವನ್ನು ಕೊಟ್ಟು ಅವರನ್ನು ವಶಪಡಿಸಿ ಕೊಂಡು ಸ್ವರ್ಗಕ್ಕೆ ಹೋಗುವ ಟಿಕೆಟನ್ನಾದರೂ ಅವರಿಂದ ಕೊಂಡು ಕೊಳ್ಳುತ್ತಾರೆ. ಈ ತರದ ಲೋಕೋಪಕಾರದ ಕಾರ್ಯವು ತಮ್ಮನ್ನು ಪಾಪಮುಕ್ತರನ್ನಾಗಿ ಮಾಡುತ್ತದೆಂದೂ, ತಾವೆಷ್ಟೇ ಪಾಪವನ್ನು ಮಾಡಿ ದ್ದರೂ ಬಾಧೆಯಾಗಲಾರದೆಂದೂ ಅವರು ತಿಳಿಯುತ್ತಾರೆ. ಹೀಗೆ ನಾನಾ ತರದ ಉದ್ದೇಶಗಳಿಂದ ಜನರು ಕಾರ್ಯಕ್ಕೆ ಪ್ರವೃತ್ತರಾಗುತ್ತಾರೆ.

ಕರ್ತವ್ಯಕ್ಕಾಗಿ ಕರ್ತವ್ಯವು. ಎಲ್ಲ ದೇಶಗಳಲ್ಲಿಯೂ ಭೂಮಿಗೆ ನಿಜ ವಾದ ಭೂಷಣಪ್ರಾಯರಾದವರು ಇದ್ದೇ ಇರುವರು. ಅವರು ಕರ್ತವ್ಯ ಕ್ಕಾಗಿಯೇ ಕರ್ತವ್ಯವನ್ನು ಮಾಡುತ್ತಾರೆ. ಅವರಿಗೆ ಹೆಸರು, ಕೀರ್ತಿ, ಸ್ವರ್ಗ ಯಾವುದೂ ಬೇಕಿಲ್ಲ. ಅದರಿಂದ ಕಲ್ಯಾಣವಾಗುವುದೆಂದು ತಿಳಿದು ಅವರು ಕರ್ತವ್ಯ ಮಾಡುತ್ತಾರೆ. ಮತ್ತೆ ಕೆಲವರು ಇದಕ್ಕೂ ಉದಾತ್ತ ಉದ್ದೇಶಗಳಿಂದ ಬಡವರಿಗೆ ಉಪಕಾರ ಮಾಡಿ ಲೋಕಹಿತವನ್ನು ಬಗೆಯು ತ್ತಾರೆ. ಯಾಕೆಂದರೆ ಸತ್ಕಾರ್ಯದಲ್ಲಿಯೂ ಸತ್ಪ್ರೇಮದಲ್ಲಿಯೂ ಅವರಿಗೆ ವಿಶ್ವಾಸವುಂಟು. ಹೆಸರು ಮತ್ತು ಕೀರ್ತಿಗಾಗಿ ಮಾಡಿದ ಕಾರ್ಯವು ಬೇಗನೇ ಫಲಕಾರಿಯಾಗುವುದಿಲ್ಲೆಂಬುದು ಗೊತ್ತಿದ್ದ ಮಾತು. ಆ ಫಲ ಗಳು ನಾವು ಮುದುಕರಾಗಿ ಆಯುಷ್ಯಕ್ರಮಣವನ್ನು ಮುಗಿಸುತ್ತ ಬಂದಾಗ ನಮಗೆ ದೊರೆಯುವವು. ಸ್ವಾರ್ಥದ ಉದ್ದೇಶವೇನೂ ಇರದೆ ಕಾರ್ಯ ಮಾಡಿದರೆ ಅವನಿಗೇನೂ ಲಾಭವಿಲ್ಲವೋ? ನಿಜವಾಗಿ ಅವನಿಗೆ ಪರಮಾ ರ್ಥವು ದೊರೆಯುವುದು. ಅಸ್ವಾರ್ಥತನದಿಂದಲೇ ಹೆಚ್ಚು ಪ್ರಯೋಜನ ವುಂಟು. ಆದರೆ ಜನರಿಗೆ ಮಾತ್ರ ಅದನ್ನು ಆಚರಿಸುವಷ್ಟು ತಾಳ್ಮೆಯೂ ಸಮಾಧಾನವೂ ಇರುವುದಿಲ್ಲ. ಆರೋಗ್ಯಪ್ರಾಪ್ತಿಯ ದೃಷ್ಟಿಯಿಂದಲೂ ಅದರಿಂದ ವಿಶೇಷ ಪ್ರಯೋಜನವುಂಟು. ಪ್ರೇಮ, ಸತ್ಯ, ಅಸ್ವಾರ್ಥತೆ ಇವು ಕೇವಲ ಭಾಷಾಲಂಕಾರಗಳಲ್ಲ. ಅವು ನಮ್ಮ ಪರಮೋಚ್ಚಧ್ಯೇಯ ಗಳು. ಏಕೆಂದರೆ ಅವುಗಳಲ್ಲಿಯೇ ನಮ್ಮ ಶಕ್ತಿಯನ್ನು ಜಾಗೃತ ಮಾಡುವ ಸಾಮರ್ಥ್ಯವಿರುತ್ತದೆ. ಐದು ದಿನಗಳ ವರೆಗೆ—ಅದೇಕೆ ಐದು ನಿಮಿಷಗಳ ವರೆಗಾದರೂ—ಸ್ವಾರ್ಥಬುದ್ಧಿಯೇನೂ ಇಲ್ಲದೆ ಸ್ವರ್ಗ, ನರಕ ಮುಂತಾದ

ಮುಂದಾಗುವುದನ್ನಾ ವುದನ್ನೂ ಯೋಚಿಸದೆ ಕಾರ್ಯಮಾಡಬಲ್ಲವನು ಅದ್ಭುತ ನೈತಿಕ ಸಾಮರ್ಥ್ಯವುಳ್ಳವನೆಂದು ಹೇಳಬಹುದು. ಅದನ್ನು ಆಚರಿಸು ವುದು ಕಠಿಣವೇನೋ ನಿಜ. ಆದರೆ ನಮ್ಮ ಅಂತರಂಗದಲ್ಲಿಯಾದರೂ ಅದರ ಮಹತ್ವವನ್ನೂ ಅದರಿಂದಾಗುವ ಕಲ್ಯಾಣವನ್ನೂ ಮನಗಾಣದೆ ಇರ ಲಾರೆವು. ಈ ಅದ್ಭುತ ಸ್ವಾರ್ಥನಿಗ್ರಹದಿಂದ ಮಹಾಶಕ್ತಿಯು ಪ್ರಕಟವಾಗು ವುದು. ಸಿಕ್ಕ ಸಿಕ್ಕ ಕಡೆ ಮನಸ್ಸನ್ನು ಸಡಿಲುಬಿಡುವುದಕ್ಕಿಂತಲೂ ಅದನ್ನು ಬಿಗಿಹಿಡಿಯುವುದಕ್ಕೆ ಹೆಚ್ಚು ಸಾಮರ್ಥ್ಯವು ಬೇಕಾಗುವುದು. ನಾಲ್ಕು ಕುದುರೆಗಳನ್ನು ಹೂಡಿದಂಥ ರಥವನ್ನು ದಿನ್ನೆಯಿಂದ ಕೆಳಗೆ ನಿಗ್ರಹವಿಲ್ಲದೆ ದೂಡಿಕೊಂಡು ಹೋಗಬಹುದು; ಅಥವಾ ಸಾರಥಿಯು ಕುದುರೆಗಳನ್ನು ನಿಗ್ರಹಿಸಿಕೊಂಡು ಹಿಡಿತದಿಂದ ರಥವನ್ನು ಸಾಗಿಸಬಹುದು. ಇವೆರಡರಲ್ಲಿ ಹೆಚ್ಚು ಶಕ್ತಿಯನ್ನು ಉಪಯೋಗಿಸಬೇಕಾಗುವುದು ಯಾವುದಕ್ಕೆ?—ಅವು ಹೋದತ್ತ ಯಥಾಕಾಮವಾಗಿ ಹೋಗಗೊಡಲಿಕ್ಕೋ ಅಥವಾ ಅವುಗಳನ್ನು ನಿಗ್ರಹಿಸಲಿಕ್ಕೋ? ಒಂದು ತೋಫಿನ ಗುಂಡು ಅಂತರಿಕ್ಷದಲ್ಲಿ ಹಾರಿ ಬಹು ದೂರಕ್ಕೆ ಹೋಗಿ ಕೆಳಗೆ ಬೀಳುತ್ತದೆ. ಮತ್ತೊಂದು, ಮಧ್ಯದಲ್ಲಿಯೇ ಒಂದು ಗೋಡೆಗೆ ಬಡೆದು ಕುಂಠಿತಗತಿಯಾಗಿ ನಿಲ್ಲುತ್ತದೆ. ಆದರೆ ಅಪ್ಪಳಿ ಸಿದ ಸ್ಥಳದಲ್ಲಿ ಘರ್ಷಣದಿಂದ ಬಹು ತೀಕ್ಷ್ಣವಾದ ಉಷ್ಣತೆಯು ಉತ್ಪನ್ನ ವಾಗುವುದು. ಸ್ವಾರ್ಥಹೇತುವಿನಿಂದ ಹೊರಬಿದ್ದ ಶಕ್ತಿಯೆಲ್ಲವೂ ವ್ಯರ್ಥ ವಾಗಿ ಹಾಳಾಗಿಹೋಗುತ್ತದೆ! ಅದರಿಂದ ತಿರುಗಿ ನಿಮಗೆ ಸಾಮರ್ಥ್ಯವು ಉತ್ಪನ್ನವಾಗುವುದಿಲ್ಲ! ಆದರೆ ಅದನ್ನು ನಿಗ್ರಹಿಸಿದ್ದರೆ ಅದ್ಭುತ ಸಾಮ ರ್ಥ್ಯದ ಬೆಳೆವಣಿಗೆಯಾಗುವುದು. ಈ ಸ್ವಾರ್ಥನಿಗ್ರಹದಿಂದ ಅದ್ಭುತ ಇಚ್ಛಾಶಕ್ತಿಯೂ ಕ್ರಿಸ್ತ ಅಥವಾ ಬುದ್ಧನಂಥ ಅಪ್ರತಿಮ ಸ್ವಭಾವಗುಣ ಮೂರ್ತಿಯೂ ಉತ್ಪನ್ನವಾಗುವುದು. ಮೂರ್ಖರಿಗೆ ಈ ರಹಸ್ಯವು ಗೊತ್ತಿರುವುದಿಲ್ಲ. ಆದರೆ ಅವರು ಮನುಷ್ಯಸಮಾಜವನ್ನು ದೊರೆಗಳಾಗಿ ಆಳಬೇಕೆನ್ನುತ್ತಾರೆ. ಒಬ್ಬ ಮೂರ್ಖನು ಕೂಡ ಸಶಾಸ್ತ್ರವಾಗಿ ಕರ್ಮ ಮಾಡಿದರೆ, ಯೋಗ್ಯ ಸಮಯವು ಒದಗಿದಾಗ ಅವನು ಇಡೀ ಜಗತ್ತನ್ನೇ ಆಳಬಹುದು. ಕೆಲವು ವರ್ಷ ತಡೆದು, ಪರರ ಮೇಲೆ ದೊರೆಯಾಗಿ ಆಳುವ ಮೂರ್ಖ ಹವ್ಯಾಸವನ್ನು ನಿಗ್ರಹಿಸಿ ಅದನ್ನು ಸಮೂಲ ನಾಶಮಾಡಿ ಬಿಟ್ಟರೆ ಲೋಕದಲ್ಲಿ ಅವನು ಮಹಾ ಶಕ್ತಿವಂತನಾಗುವನು, ತೇಜಸ್ವಿ

ಪುರುಷನಾಗುವನು. ಕೆಲವು ಪಶುಗಳು ನಾಲ್ಕಾರು ಅಡಿಗಳ ಆಚೆಗೆ ಹೇಗೆ ನೋಡಲಾರವೋ ಹಾಗೆ ನಮ್ಮಲ್ಲನೇಕರು ಕೆಲವು ವರ್ಷಗಳ ಆಚೆಗೆ ದೂರದೃಷ್ಟಿಯಿಂದ ನೋಡಲಾರರು. ನಮ್ಮ ಒಂದು ಸಣ್ಣ ಸಂಕುಚಿತ ಜಗತ್ತೇ ಬೇರೆ ಇದೆ. ಅದರಾಚೆಗೆ ನೋಡುವಷ್ಟು ತಾಳ್ಮೆ ಸಮಾಧಾನಗಳು ನಮ್ಮಲ್ಲಿಲ್ಲದೆ, ನಾವು ನೀತಿ ಭ್ರಷ್ಟರೂ ದುಷ್ಟರೂ ಆಗುತ್ತೇವೆ. ಇದೇ ನಮ್ಮ ದೌರ್ಬಲ್ಯ.

ಕರ್ಮವು ಎಂಥ ಕೀಳುತರದಿದ್ದರೂ ಅದನ್ನು ಹಳಿಯಬಾರದು. ಹೆಚ್ಚಿನ ಕೆಲಸವೇನೂ ಕೈಯಿಂದಾಗದಂಥ ರಣಹೇಡಿ ಮನುಷ್ಯನು ಸ್ವಾರ್ಥ ಹೇತುವಿನಿಂದ ಹೆಸರು ಹೆಗ್ಗಳಿಕೆಗಾಗಿ ಸಾಹಸಪಟ್ಟರೆ ಪಡಲಿ! ಆದರೆ ನಾವು ಯಾವಾಗಲೂ ಉಚ್ಚಧ್ಯೇಯಗಳನ್ನು ಚನ್ನಾಗಿ ಅರಿತುಕೊಂಡು ಅವುಗಳನ್ನು ಸಂಪಾದಿಸಲಿಕ್ಕೆ ಯತ್ನಿಸಬೇಕು. "ಕರ್ಮಣ್ಯೇ ವಾಧಿಕಾರಸ್ತೇ, ಮಾ ಫಲೇಷು ಕದಾಚನ"—ಕರ್ಮ ಮಾಡಲು ಮಾತ್ರ ನಿನಗೆ ಅಧಿಕಾರವುಂಟು. ಆದರಿಂದ ಫಲಾಶೆಯನ್ನು ಮಾಡತಕ್ಕದ್ದಲ್ಲ. ಫಲಾಶೆಯನ್ನು ಬಿಟ್ಟುಬಿಡಬೇಕು. ಫಲದ ಗೊಡವೆ ನಮಗೇಕೆ? ನೀನು ಯಾರಿಗಾದರೂ ನೆರವಾಗುವುದಿದ್ದರೆ, ಅವರು ನಿನ್ನ ವಿಷಯದಲ್ಲಿ ಯಾವ ಮನೋವೃತ್ತಿಯನ್ನು ತಾಳುವರೆಂಬುದನ್ನು ಯೋಚಿಸಬಾರದು. ಏನಾದರೂ ಮಹತ್ಕಾರ್ಯವನ್ನು ಮಾಡಬೇಕಾಗಿದ್ದರೆ ಅದರಿಂದಾವ ಫಲ ಪ್ರಾಪ್ತವಾಗುವುದೆಂಬುದನ್ನು ಯೋಚಿಸುವ ಶ್ರಮವೇ ಬೇಡ.

ಈ ಆದರ್ಶಭೂತವಾದ ಕರ್ಮವಿಷಯದಲ್ಲಿ ಮತ್ತೊಂದು ಸಂಶಯವು ಬರುವುದು. ಚಟುವಟಿಕೆ, ಸತತೋದ್ಯೋಗ ಇದು ಅವಶ್ಯ. ಕರ್ಮ ಮಾಡದೆ ಒಂದು ನಿಮಿಷ ಕೂಡ ನಾವು ಬದುಕಿ ಬಾಳಲಾರೆವು. ಆದರೆ ವಿಶ್ರಾಂತಿಯ ಸಮಾಚಾರವೇನು? ನಮ್ಮನ್ನು ತೀವ್ರ ವೇಗದಿಂದ ಸುತ್ತುಸುತ್ತಾಗಿ ಗಿರಿಗಿರಿ ತಿರುಗಿಸುವ ಕರ್ಮವು ನಮ್ಮ ಜೀವನಕ್ರಮದಲ್ಲಿಯ ಒಂದು ಚಿತ್ರವಾಯಿತು. ಮತ್ತೊಂದು ಚಿತ್ರವೆಂದರೆ ಶಾಂತ, ಏಕಾಂತ, ಸನ್ಯಸ್ತವೃತ್ತಿ; ಸುತ್ತುಮುತ್ತಲೂ ಸಂಪೂರ್ಣ ಶಾಂತತೆ, ನಿಃಶಬ್ದತೆ; ಗದ್ದಲ ಡಂಭಾಚಾರವೇನೂ ಇಲ್ಲ. ತರತರದ ಪಶುಪಕ್ಷಿಗಳು, ಪುಷ್ಪಗಳು, ವನಸ್ಪತಿಗಳು ಇವುಗಳಿಂದೊಡಗೂಡಿದ ಸೃಷ್ಟಿದೇವತೆ ಮಾತ್ರ ಕಣ್ಣೆದುರಿಗೆ ಇರುತ್ತಾಳೆ. ಇವೆರಡು ಚಿತ್ರಗಳಲ್ಲಿ ಯಾವುದೂ ಪೂರ್ಣವಾದುದಲ್ಲ.

ಅರಣ್ಯವಾಸಿಯಾಗಿ ಏಕಾಂತದಲ್ಲಿದ್ದ ಮನುಷ್ಯನನ್ನು ಪ್ರಪಂಚದ ಆಲ್ಲೋಲಕಲ್ಲೋಲವಾದ ತಿರುಗಣಿಯ ಮಡುವಿನಲ್ಲಿ ತಂದೊಗೆದರೆ ಅವನು ಜರ್ಜರಿತನಾಗಿ ಕೈಕಾಲು ಬಿಟ್ಟು ಕುಸಿದುಬೀಳುವನು. ಆಳವಾದ ಸಮುದ್ರದ ನೀರಿನಲ್ಲಿರುವ ಮೀನನ್ನು ಮೇಲುಬದಿಗೆ ತಂದರೆ, ಇದುವರೆಗೆ ಮೈಮೇಲೆ ಇದ್ದ ನೀರಿನ ಭಾರವು ಒಮ್ಮೆಲೇ ಇಲ್ಲದಂತಾಗಿ ಸುತ್ತಲಿನ ಒತ್ತುವಿಕೆಯೂ ಬಿಗಿಯೂ ಇಲ್ಲದ್ದರಿಂದ ತುಂಡುತುಂಡಾಗಿ ನಾಶಹೊಂದು ವುದು. ಅದರಂತೆ ಸಂಸಾರಪ್ರವಾಹದ ಸೆಳವಿನಲ್ಲಿಯೂ ಪ್ರಪಂಚದ ಆವೇಶ, ಗದ್ದಲಗಳಲ್ಲಿಯೂ ವಾಸಮಾಡಿದ ಮನುಷ್ಯನನ್ನು ನಿಶ್ಶಬ್ದವಾದ ಏಕಾಂತ ಸ್ಥಳದಲ್ಲಿಟ್ಟರೆ ಅವನು ಸುಖವಾಗಿರಬಹುದೋ ? ಅವನ ಮನ ಸ್ಸಿಗೆ ವ್ಯಥೆಯಾಗಿ ಹುಚ್ಚು ಕೂಡ ಹಿಡಿಯಬಹುದು. ಯಾವನು ಸಂಪೂರ್ಣ ನಿಶ್ಶಬ್ದವಾದ ಏಕಾಂತ ಸ್ಥಳದಲ್ಲಿ ಕೂಡ ತೀಕ್ಷ್ಣವಾದ ಸತತೋದ್ಯೋಗ ವನ್ನು ಕಂಡುಕೊಳ್ಳಬಲ್ಲನೋ, ಅದರಂತೆ ಯಾವನು ತೀಕ್ಷ್ಣವಾದ ಸತ ತೋದ್ಯೋಗದ ಮಧ್ಯದಲ್ಲಿ ಕೂಡ ಅರಣ್ಯವಾಸದ ನಿಶ್ಶಬ್ದತೆಯನ್ನೂ ಏಕಾಂತವನ್ನೂ ಕಂಡುಕೊಳ್ಳಬಲ್ಲನೋ, ಅವನೇ ಆದರ್ಶ ಪುರುಷನು. ಆತ್ಮನಿಗ್ರಹದ ರಹಸ್ಯವು ಅವನಿಗೆ ಮಾತ್ರ ಗೊತ್ತುಂಟು. ಅಂಥವನ ಮನಸ್ಸು ವಿವಿಧವಾದ ವ್ಯಾಪಾರೋದ್ಯೋಗಗಳ ಚಲನವಲನೆಯಿಂದೊಡ ಗೂಡಿದ ದೊಡ್ಡ ಪಟ್ಟಣದ ಬೀದಿಗಳಲ್ಲಿ ಹಾಯ್ದುಹೋಗುವಾಗ ಕೂಡ ನಿಶ್ಶಬ್ದವಾದ ಗುಹೆಯಲ್ಲಿದ್ದಂತೆ ಶಾಂತವಾಗಿರಬಲ್ಲದು. ಇದೇ ಕರ್ಮ ಯೋಗ. ಈ ಸ್ಥಿತಿ ನಿನಗೆ ಪ್ರಾಪ್ತವಾಗಿದ್ದರೆ ಕರ್ಮದ ರಹಸ್ಯವು ನಿನಗೆ ತಿಳಿದಂತಾಯಿತು.

ಈ ಸ್ಥಿತಿಯನ್ನು ದೊರಕಿಸಿಕೊಳ್ಳುವುದಕ್ಕಾಗಿ ನಮ್ಮ ಸದ್ಯದ ಸ್ಥಿತಿ ಯಲ್ಲಿಯೇ ಇದ್ದು ಆರಂಭಮಾಡಬೇಕು. ತಾವಾಗಿ ನಮಗೆ ಪ್ರಾಪ್ತವಾದ ಕರ್ಮಗಳನ್ನು ಕೈಕೊಂಡು ದಿನದಿನಕ್ಕೆ ನಿದಾನವಾಗಿ ಸ್ವಾರ್ಥಬುದ್ಧಿಯನ್ನು ಕಿತ್ತೊಗೆಯುತ್ತ ಮುಂದಕ್ಕೆ ಸಾಗಬೇಕು. ಕರ್ಮವನ್ನು ಮಾಡುಮಾಡುತ್ತ ನಮ್ಮನ್ನು ಪ್ರೇರಿಸಿದ ಉದ್ದೇಶವನ್ನು ಪರೀಕ್ಷಿಸಬೇಕು. ಮೊದಮೊದಲು ಕೆಲವು ವರ್ಷಗಳ ವರೆಗೆ ನಮ್ಮ ಉದ್ದೇಶಗಳು ಯಾವಾಗಲೂ ಸ್ವಾರ್ಥ ಮೂಲಕವಾಗಿರುವವೆಂದು ಕಂಡುಬರುವುದು. ಆದರೆ ಕ್ರಮೇಣ ಸತತ ಸಾಹಸದಿಂದ ಈ ಸ್ವಾರ್ಥಬುದ್ಧಿಯು ಕರಗತೊಡಗುವುದು. ಕೊನೆಗೆ

ಶುದ್ಧವಾದ ಅಸ್ವಾರ್ಥ ಕರ್ಮವನ್ನು ಮಾಡಲು ನಾವು ಸಮರ್ಥರಾಗುವೆವು. ನಮ್ಮ ಆಯುಷ್ಯಪ್ರಮಾಣವು ಮುಂದೆ ಮುಂದೆ ಸಾಗಿದಂತೆ ನಾವೆಲ್ಲರೂ ಸಂಪೂರ್ಣವಾಗಿ ಸ್ವಾರ್ಥರಹಿತರಾಗುವ ವೇಳೆಯು ಒಮ್ಮಿಲ್ಲೊಮ್ಮೆ ಬರುವುದೆಂಬ ವಿಶ್ವಾಸವು ಇರಲಿ. ಈ ಸ್ಥಿತಿ ಪ್ರಾಪ್ತವಾದ ಕೂಡಲೆ ನಮ್ಮ ಶಕ್ತಿಸಾಮರ್ಥ್ಯಗಳೆಲ್ಲವೂ ಏಕಮುಖವಾಗುವವು; ಮತ್ತು ನಮ್ಮ ಜನ್ಮಸಿದ್ಧ ಹಕ್ಕಾದ ಜ್ಞಾನವು ಪ್ರಕಟವಾಗುವುದು.

೨

## ಪ್ರತಿಯೊಬ್ಬ ಮನುಷ್ಯನು ತನ್ನಷ್ಟಕ್ಕೆ ತಾನು ದೊಡ್ಡವನೇ !

ಸಾಂಖ್ಯಶಾಸ್ತ್ರದ ಪ್ರಕಾರ ಸತ್ವ, ರಜ, ತಮಗಳೆಂಬ ಮೂರು ಗುಣಗಳು ಕೂಡಿ ಪ್ರಕೃತಿಯಾಗುತ್ತದೆ. ಸೃಷ್ಟಿಯೊಳಗಿನ ಈ ಮೂರು ಗುಣಗಳ ದೃಶ್ಯಫಲಗಳು ಅನುಕ್ರಮವಾಗಿ ಸ್ಥೈರ್ಯ, ಚಾಪಲ್ಯ, ಜಾಡ್ಯ. ತಮಸ್ಸಿನ ದೃಶ್ಯರೂಪವು ಅಜ್ಞಾನ ಅಥವಾ ಜಾಡ್ಯ. ರಜೋಗುಣದ ಲಕ್ಷಣವು ಕಾಮ, ಕ್ರೋಧ, ಬೇಕುಬೇಡಗಳಿಂದೊಡಗೂಡಿದ ಚಾಪಲ್ಯ. ಇವೆರಡನ್ನೂ ನಿಗ್ರಹಿಸಿ ಸಮತೂಕವಾಗಿಡುವುದೇ ಸತ್ವಗುಣವು. ಪ್ರತಿಯೊಬ್ಬ ಮನುಷ್ಯನಲ್ಲಿ ಈ ಮೂರು ಶಕ್ತಿಗಳಿರುತ್ತವೆ. ಒಮ್ಮೆ ತಮೋಗುಣವು ಪ್ರಬಲವಾದಾಗ ನಾವು ಆಲಸ್ಯವುಳ್ಳವರಾಗುತ್ತೇವೆ, ಗತಿಯು ಕುಂಠಿತವಾಗುತ್ತದೆ; ನಾವು ಸ್ತಬ್ಧರೂ ಕ್ರಿಯಾಶೂನ್ಯರೂ ಆಗುತ್ತೇವೆ. ಯಾವ ವಿಚಾರವೂ ತೋಚುವುದಿಲ್ಲ. ಒಮ್ಮೆ ರಜೋಗುಣದ ಪ್ರಾಬಲ್ಯದಿಂದ ಕ್ರಿಯಾತ್ಮಕ ಚಾಪಲ್ಯವು ತೋರ್ಪಡುವುದು. ಮತ್ತೊಮ್ಮೆ ಶಾಂತ ಸಮತೂಕವು ಸತ್ವಗುಣದ ಪ್ರಾಬಲ್ಯದಿಂದ ಕಂಡುಬರುವುದು. ಇದಲ್ಲದೆ ಬೇರೆ ಬೇರೆ ಜನರಲ್ಲಿ ಸಾಧಾರಣವಾಗಿ ಈ ಮೂರರಲ್ಲಿ ಒಂದು ಶಕ್ತಿಯು ವಿಶೇಷ ಪ್ರಬಲವಾಗಿರುತ್ತದೆ. ನಿಷ್ಕ್ರಿಯೆ, ಜಾಡ್ಯ, ಆಲಸ್ಯ, ಸ್ತಬ್ಧತೆ ಇವು ಒಬ್ಬ ಮನುಷ್ಯನ ಲಕ್ಷಣಗಳಾಗಿದ್ದರೆ ಚಾಪಲ್ಯ, ಸಾಮರ್ಥ್ಯ, ಶಕ್ತಿಪ್ರದರ್ಶನ, ಉದ್ಯೋಗ ಇವು ಮತ್ತೊಬ್ಬ ಮನುಷ್ಯನ ಲಕ್ಷಣಗಳಾಗಿರುತ್ತವೆ. ಮೂರನೆಯವನಲ್ಲಿ ಮಾಧುರ್ಯ, ಶಾಂತತೆ, ನಮ್ರತೆ, ಸಭ್ಯತೆ,

ಕ್ರಿಯಾನಿಷ್ಕ್ರಿಯೆಗಳ ಸಮತೋಲಾವಸ್ಥೆ ಈ ಮೂರು ಲಕ್ಷಣಗಳು ಕಂಡು ಬರುತ್ತವೆ. ಸಸ್ಯ, ಪಶು, ಮನುಷ್ಯ ಮೊದಲಾದ ಸರ್ವ ಸೃಷ್ಟಿಯಲ್ಲಿಯೂ ಈ ಮೂರು ಭಿನ್ನ ಶಕ್ತಿಗಳ ಮೂರ್ತಸ್ವರೂಪವು ದೃಗ್ಗೋಚರವಾಗುತ್ತದೆ.

ಕರ್ಮಯೋಗದಲ್ಲಿ ಮುಖ್ಯವಾಗಿ ಈ ಮೂರು ಗುಣಗಳ ವಿಚಾರವು ಅವಶ್ಯ. ಈ ಗುಣಗಳೆಂದರೇನು, ಅವುಗಳ ಸ್ವರೂಪವೇನು, ಅವುಗಳನ್ನು ಹೇಗೆ ಉಪಯೋಗಿಸಿಕೊಳ್ಳಬಹುದು, ಎಂಬುದನ್ನು ತಿಳಿದುಕೊಳ್ಳುವುದರಿಂದ ನಮ್ಮ ಕರ್ತವ್ಯವನ್ನು ಹೆಚ್ಚು ಚನ್ನಾಗಿ ಮಾಡಲಿಕ್ಕೆ ಅನುಕೂಲವಾಗುವುದು. ಮಾನವೀ ಸಮಾಜವು ಭಿನ್ನ ಭಿನ್ನ ಅವಸ್ಥೆಗಳಲ್ಲಿದ್ದ ಜನರಿಂದ ಕೂಡಿದೆ. ನೀತಿಯೆಂದರೇನು, ಕರ್ತವ್ಯವೆಂದರೇನು, ಎಂಬುದು ನಮ್ಮೆಲ್ಲರಿಗೆ ಗೊತ್ತಿದೆ. ಆದರೂ ಭಿನ್ನ ಭಿನ್ನ ದೇಶಗಳಲ್ಲಿ ನೀತಿಯ ಕಲ್ಪನೆ ಭಿನ್ನ ಭಿನ್ನವಾಗಿರುತ್ತದೆಂದು ಕಂಡುಬರುತ್ತದೆ. ಒಂದು ದೇಶದಲ್ಲಿ ನೀತಿಯಾಗಿದ್ದದ್ದು ಮತ್ತೊಂದು ದೇಶದಲ್ಲಿ ಸಂಪೂರ್ಣ ಅನೀತಿಯಾಗಬಹುದು. ಉದಾಹರಣೆಗೆ ಹೇಳುವುದಾದರೆ, ಒಂದು ದೇಶದಲ್ಲಿ ಚಿಕ್ಕಪ್ಪನ ಮಗಳನ್ನು ಲಗ್ನವಾಗುವುದು ವ್ಯವಹಾರದಲ್ಲಿದೆ; ಅದೇ ಕೃತಿ ಮತ್ತೊಂದು ದೇಶದಲ್ಲಿ ಅನೀತಿಯಾಗುತ್ತದೆ. ಒಂದು ದೇಶದಲ್ಲಿ ಸೋದರತ್ತೆಯ ಮಗಳನ್ನು ಲಗ್ನವಾಗಬಹುದು; ಮತ್ತೊಂದು ದೇಶದಲ್ಲಿ ಅದು ಅನೀತಿಯೆಂದು ತಿಳಿವಳಿಕೆ ಇದೆ. ಒಂದು ದೇಶದಲ್ಲಿ ಜನರು ಒಮ್ಮೆ ಮಾತ್ರ ಲಗ್ನವಾಗುವುದು ನೀತಿ. ಮತ್ತೊಂದು ದೇಶದಲ್ಲಿ ಅನೇಕ ಸಲ ಲಗ್ನವಾಗಬಹುದು. ಅದರಂತೆ ಉಳಿದ ನೀತಿಗಳ ವಿಷಯದಲ್ಲಿಯೂ ಕಲ್ಪನೆಗಳು ದೇಶ ಕಾಲ ಪರಿಸ್ಥಿತಿಗಳಿಗನುಸರಿಸಿ ಭಿನ್ನ ಭಿನ್ನವಾಗುತ್ತವೆ. ಆದರೂ ನೀತಿಯನ್ನು ಅಳೆಯುವ ಅಳತೆ ಎಲ್ಲ ಕಡೆಗೂ ಒಂದೇ ಇರಬೇಕೆಂದು ನಮ್ಮೆಲ್ಲರ ಕಲ್ಪನೆಯಿದೆ.

ಕರ್ತವ್ಯದ ವಿಷಯದಲ್ಲಿಯೂ ಇದೇ ಮಾತು. ಕರ್ತವ್ಯದ ಕಲ್ಪನೆಯೂ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆಯಾಗಿರುತ್ತದೆ. ಒಬ್ಬ ಮನುಷ್ಯನು ಕೆಲವು ಕಾರ್ಯಗಳನ್ನು ಮಾಡದಿದ್ದರೆ ಒಂದು ದೇಶದಲ್ಲಿ ಅವನು ತಪ್ಪು ಮಾಡಿದನೆನ್ನುತ್ತಾರೆ. ಅವೇ ಕಾರ್ಯಗಳನ್ನು ಮತ್ತೊಂದು ದೇಶದಲ್ಲಿ ಮಾಡಿದರೆ, ದೋಷವೆನ್ನಿಸಿಕೊಳ್ಳುವುದು. ಆದರೂ ಮಾನವ ಪ್ರಾಣಿಗೆಲ್ಲ ಸರ್ವಸಾಮಾನ್ಯವಾದ ಕರ್ತವ್ಯದ ಕಲ್ಪನೆಯೊಂದು ಇರಲೇ

ಬೇಕೆಂದು ನಮಗೆ ತಿಳಿಯುತ್ತದೆ. ಆದರಂತೆ ಕೆಲವು ಕರ್ಮಗಳು ತನ್ನ ಕರ್ತವ್ಯವೆಂದು ಸಮಾಜದ ಒಂದು ವರ್ಗವು ತಿಳಿದುಕೊಳ್ಳುತ್ತದೆ. ಅದೇ ಸಮಾಜದ ಮತ್ತೊಂದು ವರ್ಗವು ಅವುಗಳನ್ನು ಮಾಡುವುದು ದೋಷ ವೆಂದು ಹೇಸಿಕೊಳ್ಳುತ್ತದೆ. ಮೂಢನ ಹಾದಿಯೊಂದು, ಬುದ್ಧಿವಂತನ ಹಾದಿಯೊಂದು ಹೀಗೆ ಎರಡು ಮಾರ್ಗಗಳು ನಮ್ಮೆದುರಿಗಿರುತ್ತವೆ. ಸತ್ಯಕ್ಕೆ ಒಂದೇ ಮಾರ್ಗವಿರುವುದೆಂದೂ ಉಳಿದವು ಶುದ್ಧ ಭ್ರಮೆಯೆಂದೂ ತಿಳಿದು ಕೊಳ್ಳುವುದು ಮೂಢನ ಹಾದಿ. ನಮ್ಮ ಮನೋರಚನೆಯ ಪ್ರಕಾರ ಅಥವಾ ನಮ್ಮ ಜೀವನದ ಅವಸ್ಥಾಂತರಗಳ ಪ್ರಕಾರ ನೀತಿ ಮತ್ತು ಕರ್ತವ್ಯಗಳ ಕಲ್ಪನೆಗಳು ಭಿನ್ನಭಿನ್ನವಾಗಿವೆಯೆಂದು ತಿಳಿಯುವುದು ಬುದ್ಧಿ ವಂತನ ಹಾದಿ. ನೀತಿಮಾರ್ಗದಲ್ಲಿಯೂ ಕರ್ತವ್ಯಮಾರ್ಗದಲ್ಲಿಯೂ ಹೆಚ್ಚುಕಡಿಮೆ ಮಟ್ಟಗಳು ಇರುವವೆಂಬುದನ್ನೂ ಒಂದು ತರದ ಪರಿಸ್ಥಿತಿ ಅಥವಾ ಅವಸ್ಥೆಯಲ್ಲಿಯ ಕರ್ತವ್ಯವು ಮತ್ತೊಂದರಲ್ಲಿಯ ಕರ್ತವ್ಯವಾಗ ಲಾರದೆಂಬುದನ್ನೂ ತಿಳಿದುಕೊಳ್ಳುವುದು ಬಹು ಮಹತ್ವದ ಮಾತಾಗಿದೆ.

ಉದಾಹರಣೆಗೆ 'ದುಷ್ಟರ ಪ್ರತಿಕಾರ ಮಾಡಬಾರದೆಂದೂ ಅಪ್ರತಿ ಕಾರವೇ ಶ್ರೇಷ್ಠ ನೈತಿಕ ಆದರ್ಶವೆಂದೂ ಎಲ್ಲ ದೊಡ್ಡ ಧರ್ಮೋಪದೇಶ ಕರು ಉಪದೇಶ ಮಾಡಿದ್ದಾರೆ. ಆದರೆ ನಮ್ಮಲ್ಲಿ ಕೆಲವರು ಈ ಉಪದೇಶ ದಂತೆ ಆಚರಿಸುವುದಾದರೆ ಸಮಾಜರಚನೆಯೆಲ್ಲವೂ ಕೆಟ್ಟುಹೋಗುವುದು. ದುಷ್ಟ ಜನರು ನಮ್ಮ ಆಸ್ತಿ ಸ್ವತ್ತುಗಳನ್ನೆಲ್ಲ ಕಿತ್ತುಕೊಂಡು ನಮ್ಮ ಜೀವ ವನ್ನೂ ನಾಶಮಾಡುವರು; ತಮ್ಮ ಮನಸ್ಸಿಗೆ ಬಂದದ್ದನ್ನು ಮಾಡ ತೊಡಗುವರು. ಈ ಅಪ್ರತಿಕಾರ ತತ್ವವನ್ನು ಒಂದೇ ಒಂದು ದಿನ ಪಾಲಿಸಿದರೂ ಬಹಳ ಅನರ್ಥವುಂಟಾಗುವುದು. ಆದರೂ ಸ್ವಭಾವತಃ ಈ ಅಪ್ರತಿಕಾರ ತತ್ವವು ಸತ್ಯವಿರುವುದೆಂದು ನಮ್ಮ ಅಂತರಂಗದಲ್ಲಿ ಎನಿಸು ವುದು. ಅದು ಅತ್ಯುಚ್ಚ ಧ್ಯೇಯವೆಂದೂ ನಮಗೆ ತಿಳಿಯುತ್ತದೆ. ಆದರೂ ಈ ತತ್ವವನ್ನು ಉಪದೇಶಿಸುವುದೆಂದರೆ ಮಾನವೀ ಸಮಾಜದ ಬಹುಜನ ರನ್ನು ಹಳಿದು ಮೂಲೆಗುಂಪು ಮಾಡಿ ಕುಳ್ಳಿರಿಸಿದಂತೆಯೇ ಸರಿ. ಇಷ್ಟೇ ಅಲ್ಲ, ಆ ಮನುಷ್ಯರು ಇದುವರೆಗೆ ತಾವು ಪಾಪ ಮಾಡುತ್ತ ಬಂದಿರುವೆ ವೆಂದು ನಾಚಿಕೊಳ್ಳುತ್ತಾರೆ; ಅವರ ಪ್ರತಿಯೊಂದು ಕಾರ್ಯದಲ್ಲಿಯೂ ಅವರ ವಿವೇಕಬುದ್ಧಿಯು ಚುಚ್ಚುವುದು, ಅವರಲ್ಲಿ ದೌರ್ಬಲ್ಯವನ್ನುಂಟು

ಮಾಡುವುದು; ಮತ್ತು ಸ್ವದೋಷದ ಈ ನಿರಂತರ ಕಲ್ಪನೆಯು ಉಳಿದ ದೌರ್ಬಲ್ಯಗಳಿಗಿಂತ ಹೆಚ್ಚಿನ ದುರ್ಗುಣಗಳನ್ನುಂಟುಮಾಡುತ್ತದೆ. ತನ್ನನ್ನೇ ತಿರಸ್ಕರಿಸುತ್ತಿರುವ ಮನುಷ್ಯನಿಗೆ ಅವನತಿಮಂದಿರದ ಹೆಬ್ಬಾಗಿಲು ತೆರೆದಿಟ್ಟಿರುತ್ತದೆ. ರಾಷ್ಟ್ರದ ವಿಷಯದಲ್ಲಿಯೂ ಇದೇ ತತ್ವವು ಅನ್ವಯಿಸುತ್ತದೆ.

ನಮ್ಮ ಮೊದಲನೇ ಕರ್ತವ್ಯವೆಂದರೆ, ನಮ್ಮನ್ನೇ ನಾವು ತಿರಸ್ಕರಿಸದೆ ಇರುವುದು. ಏಕೆಂದರೆ ನಮ್ಮ ಪ್ರಗತಿಯಾಗಬೇಕಾದರೆ, ಆತ್ಮವಿಶ್ವಾಸವೂ ದೇವರಲ್ಲಿ ವಿಶ್ವಾಸವೂ ಇವೆರಡೂ ಶಕ್ಯವಿಲ್ಲ. ಆದ್ದರಿಂದ ನೀತಿಯೂ ಕರ್ತವ್ಯವೂ ಭಿನ್ನ ಭಿನ್ನ ಪರಿಸ್ಥಿತಿಗಳಲ್ಲಿ ಭಿನ್ನ ಭಿನ್ನವಾಗಿರುವವೆಂದು ತಿಳಿದುಕೊಳ್ಳುವ ಒಂದೇ ಮಾರ್ಗವು ನಮ್ಮೆದುರಿಗಿರುತ್ತದೆ. ದುಷ್ಟರ ಪ್ರತಿಕಾರ ಮಾಡುವುದು ಯಾವಾಗಲೂ ಅಪರಾಧವೆಂದು ತಿಳಿಯಕೂಡದು. ಇಂಥ ಪರಿಸ್ಥಿತಿಯಲ್ಲಿದ್ದವನು ದುಷ್ಟರ ಪ್ರತಿಕಾರ ಮಾಡುವುದು ಕೂಡ ಕರ್ತ:

ಅರ್ಜುನನು ತನಗೆ ಎದುರಾಗಿ ನಿಂತ ಶತ್ರುಗಳು ಷ್ಟಮಿತ್ರರೂ ಆಪ್ತರೂ ದಾಯಾದಿಗಳೂ ಇದ್ದುದರಿಂದಲೂ, ಅಹಿಂಸೆ ಅಥವಾ ಅಪ್ರತಿಕಾರವು ಶ್ರೇಷ್ಠ ಧರ್ಮವಿದ್ದುದರಿಂದಲೂ ಶತ್ರುಗಳ ಕೂಡ ಯುದ್ಧಮಾಡಲಾರೆನೆಂದೂ ಪ್ರತಿಕಾರ ಮಾಡಲು ಮನಸ್ಸು ಒಪ್ಪದೆಂದೂ ಹೇಳಿದನು. ಆಗ ಭಗವದ್ಗೀತೆಯ ೨ನೇ ಅಧ್ಯಾಯದಲ್ಲಿ ಹೇಳಿದಂತೆ ಶ್ರೀಕೃಷ್ಣನು ಅರ್ಜುನನನ್ನು ದಾಂಭಿಕನೆಂದೂ ಹೇಡಿಯೆಂದೂ ಕರೆಯುತ್ತಾನೆ. ಇದನ್ನು ಕೇಳಿ ಅನೇಕರಿಗೆ ಆಶ್ಚರ್ಯವಾಗಬಹುದು. ಇದರಿಂದ ನಾವು ಮಹತ್ವದ ಬೋಧವನ್ನು ಹೊಂದುವಂತಿದೆ. ಯಾವುದೇ ವಿಷಯದಲ್ಲಿ ಕಟ್ಟಕಡೆಯ ತುದಿಗಳೆರಡರಲ್ಲಿಯೂ ಬಹಳ ಸಾಮ್ಯವಿರುತ್ತದೆ. ಬೆಳಕು ಅತಿಶಯ ತೀಕ್ಷ್ಣವಾಗಿದ್ದರೂ ನಮ್ಮ ಕಣ್ಣಿಗೆ ಕಾಣುವುದಿಲ್ಲ; ಅದರಂತೆ ಅತಿಶಯ ಮಂದವಾಗಿದ್ದರೂ ನಮಗೆ ಕಾಣುವುದಿಲ್ಲ. ಅದರಂತೆ ಸಪ್ಪಳ ಅಥವಾ ಧ್ವನಿಯು ಅತಿಶಯ ಮಂದವಾಗಿದ್ದರೂ ಅಥವಾ ಅತ್ಯುಚ್ಚವಾಗಿದ್ದರೂ ಕೇಳಬರುವುದಿಲ್ಲ. ಹಿಂಸೆ ಮತ್ತು ಅಹಿಂಸೆ, ಪ್ರತಿಕಾರ ಮತ್ತು ಅಪ್ರತಿಕಾರ ಇವುಗಳಲ್ಲಿಯ ಅಂತರವು ಇದೇ ತರದ್ದು. ಸಾಮಾನ್ಯ ಸ್ಥಿತಿಯಲ್ಲಿ ವಿರೋಧ ಕಂಡುಬಂದರೂ ಇವುಗಳ ಆತ್ಯಂತಿಕ ಸ್ಥಿತಿಗತಿಗಳ ತೋರಿಕೆಯ ಬಾಹ್ಯರೂಪದಲ್ಲಿ ಸಂಪೂರ್ಣ ಸಾಮ್ಯವು ಕಂಡುಬರುವುದು. ಒಬ್ಬನು

ಪ್ರತಿಕಾರ ಮಾಡದೆ ಇರುವುದಕ್ಕೆ ಅವನು ದುರ್ಬಲನೂ ಸೋಮಾರಿಯೂ ಕೈಲಾಗದವನೂ ಇರುವುದೇ ಕಾರಣವಾಗುತ್ತದೆ. ಮತ್ತೊಬ್ಬನು ಇಷ್ಟ ಬಂದರೆ ಶತ್ರುವನ್ನು ಹಣ್ಣುಗಾಯಿ ನೀರುಗಾಯಿ ಮಾಡಬಲ್ಲೆನೆಂದು ಗೊತ್ತಿದ್ದರೂ ಪ್ರತಿಕಾರ ಮಾಡುವುದಿಲ್ಲವಷ್ಟೇ ಅಲ್ಲ,—ಪ್ರತಿಯಾಗಿ ತನ್ನ ಶತ್ರುಗಳಿಗೆ ಕಲ್ಯಾಣವಾಗಲೆಂದು ಹರಸುತ್ತಾನೆ. ಆತ್ಮದೌರ್ಬಲ್ಯದಿಂದ ಪ್ರತಿಕಾರ ಮಾಡದಿರುವವನು ಪಾಪ ಮಾಡಿದಂತಾಯಿತು. ಈ ತರದ ಅಹಿಂಸೆಯಿಂದ ಏನೂ ಪ್ರಯೋಜನವಾಗಲಾರದು. ಬೇಕಾದಷ್ಟು ಬಲ ವಂತನಿದ್ದರೂ ಪ್ರತಿಕಾರ ಮಾಡದಿರುವವನೇ ಶ್ರೇಷ್ಠನು. ಇಂಥವನು ಪ್ರತಿಕಾರ ಮಾಡಿದರೆ ಪಾಪ ಮಾಡಿದಂತಾಗುವುದು. ಬುದ್ಧನು ತನ್ನ ವೈಭವಸ್ಥಿತಿಯನ್ನೂ ಅರಸುಪಟ್ಟವನ್ನೂ ತೊರೆದುಹೋದನು. ಇದು ನಿಜ ವಾದ ವೈರಾಗ್ಯ. ಆದರೆ ತೊರೆಯಲಿಕ್ಕೆ ಕಾಸು ಕೂಡ ಇಲ್ಲದ ಶತದರಿದ್ರನ ವಿಷಯದಲ್ಲಿ ವೈರಾಗ್ಯದ ಮಾತೇ ಹುಟ್ಟುವುದಿಲ್ಲ. ಆದ್ದರಿಂದ ಅಹಿಂಸೆ, ಅಪ್ರತಿಕಾರ, ಶುದ್ಧತೆ, ಶ್ರೇಷ್ಠತೆ, ಪ್ರೇಮ ಮೊದಲಾದ ದೊಡ್ಡ ಮಾತು ಗಳನ್ನಾಡುವಾಗ ನಾವು ಯಾವಾಗಲೂ ಎಚ್ಚರದಿಂದಿರಬೇಕು. ಪ್ರತಿಕಾರ ಮಾಡುವ ಸಾಮರ್ಥ್ಯವು ನಮ್ಮಲ್ಲಿದೆಯೋ ಹೇಗೆಂಬುದನ್ನು ಮೊದಲು ಆಲೋಚಿಸಬೇಕು. ಸಾಮರ್ಥ್ಯವಿದ್ದೂ ಅದನ್ನು ತೊರೆದು ಪ್ರತಿಕಾರ ಮಾಡದಿದ್ದರೆ ನಾವು ಒಂದು ದೊಡ್ಡ ಪ್ರೇಮಕಾರ್ಯವನ್ನು ಮಾಡಿದಂತಾ ಗುವುದು. ಆದರೆ ಪ್ರತಿಕಾರ ಮಾಡುವ ಶಕ್ತಿ ಇಲ್ಲದಿದ್ದರೂ ನಾವು ಅತ್ಯುಚ್ಚ ಪ್ರೇಮಪ್ರೇರಿತರಾಗಿ ಪ್ರತಿಕಾರ ಮಾಡಲಿಲ್ಲವೆಂದು ತಿಳಿದು ಆತ್ಮ ವಂಚನೆ ಮಾಡಿಕೊಳ್ಳಲೆತ್ನಿಸುವುದರಿಂದ ಆತ್ಮಘಾತ ಮಾಡಿಕೊಂಡಂತಾಗು ವುದು. ಅರ್ಜುನನು ತನಗೆದುರಾಗಿ ನಿಂತಿದ್ದ ಪ್ರಚಂಡ ಶತ್ರುಸೇನಾ ಸಮೂಹವನ್ನು ಕಂಡು ಭಯಗ್ರಸ್ತನಾದನು. ಪ್ರೇಮಪಾಶ ಬದ್ಧನಾದ್ದ ರಿಂದ ಅವನಿಗೆ ತನ್ನ ದೇಶಕ್ಕೂ ತನ್ನ ಅರಸನಿಗೂ ಮಾಡತಕ್ಕ ಕರ್ತವ್ಯ ಗಳ ಅರಿವು ಇಲ್ಲದಂತಾಯಿತು. ಆದ್ದರಿಂದಲೇ ಶ್ರೀಕೃಷ್ಣನು ಅವನನ್ನು ಡಾಂಭಿಕನೆಂದು ಹಳಿದು, "ನೀನು ಪಂಡಿತನಂತೆ ದೊಡ್ಡ ಮಾತುಗಳನ್ನಾ ಡುತ್ತಿ. ಆದರೆ ನಿನ್ನ ಕೃತಿಯು ಮಾತ್ರ ನೀನು ಹೇಡಿಯೆಂದು ತೋರಿ ಸುತ್ತದೆ. ಆದ್ದರಿಂದ ತಡಮಾಡದೆ ಏಳು, ಯುದ್ಧಕ್ಕೆ ಸಜ್ಜಾಗು" ಎಂದು ಉಪದೇಶ ಮಾಡಿದನು.

ಕರ್ಮಯೋಗದ ತಿರುಳು ಈ ಪ್ರಕಾರವಿರುತ್ತದೆ. ಅಪ್ರತಿಕಾರವೆಂಬ ತತ್ವವು ಅತಿಶಯ ಉಚ್ಚವಾಗಿರುತ್ತದೆಂಬುದನ್ನು ಪ್ರತಿಯೊಬ್ಬ ಕರ್ಮಯೋಗಿ ಬಲ್ಲನು. ಪ್ರತಿಕಾರದ ಪೂರ್ಣ ಸಾಮರ್ಥ್ಯವು ಮೈಯಲ್ಲಿರುವುದರ ಜೊತೆಗೆ ಮನಸ್ಸನ್ನು ವಶದಲ್ಲಿಟ್ಟುಕೊಂಡು ಪ್ರತಿಕಾರ ಮಾಡದೆ ಇರುವುದರಿಂದ ಉತ್ಪನ್ನವಾಗುವ ಶಕ್ತಿಯ ಜ್ಞಾನವೂ ಅವನಿಗೆ ಪೂರ್ಣವಾಗಿರುತ್ತದೆ. ಆದರೆ ಇಂಥ ಅತ್ಯುಚ್ಚ ಸ್ಥಿತಿಯನ್ನು ಪ್ರಾಪ್ತಮಾಡಿಕೊಳ್ಳುವ ವರೆಗೆ ಪ್ರತಿಕಾರ ಮಾಡಿಯೇ ತನ್ನ ಸಾಮರ್ಥ್ಯವನ್ನು ಬೆಳೆಸಿಕೊಳ್ಳಬೇಕೆಂದು ಅವನು ತಿಳಿದು ಆದರಂತೆ ವರ್ತಿಸುತ್ತಿರುತ್ತಾನೆ. ಸ್ಪಷ್ಟವಾಗಿ ಹೇಳಬೇಕಾದರೆ, ಪ್ರತಿಕಾರವೆಂಬುದು ಅಪ್ರತಿಕಾರವೆಂಬ ಉಚ್ಚ ಆದರ್ಶಕ್ಕೆ ಮೆಟ್ಟಲು. ಈ ಉಚ್ಚ ಧ್ಯೇಯವನ್ನು ಮುಟ್ಟುವ ಮೊದಲು ಪ್ರತಿಕಾರ ಮಾಡುವುದು ಕರ್ತವ್ಯ. ಸಾಹಸಕಾರ್ಯ ಮಾಡಿ ಹೊಡೆದಾಡಿ ಬಡಿದಾಡಿ ಕಾದಿ ಪ್ರತಿಕಾರ ಮಾಡುವ ಶಕ್ತಿಯನ್ನು ಸಂಪಾದಿಸಿದ ಮೇಲೆ ಅಪ್ರತಿಕಾರವು ಒಂದು ಸದ್ಗುಣವೆಂದು ಪ್ರಶಂಸೆಯನ್ನು ಹೊಂದಬಹುದು.

ನನ್ನ ದೇಶದಲ್ಲಿ ನಾನೊಮ್ಮೆ ಒಬ್ಬ ಮನುಷ್ಯನನ್ನು ಕಂಡೆನು. ಅವನು ಅತಿಶಯ ದಡ್ಡನೂ ಮೂರ್ಖನೂ ಹುಂಬನೂ ಇದ್ದನೆಂದು ನನಗೆ ಮೊದಲೇ ಗೊತ್ತಿತ್ತು. ಅವನಿಗೆ ಎಳ್ಳಷ್ಟೂ ಜ್ಞಾನವಿದ್ದಿಲ್ಲ. ಏತರ ಜ್ಞಾನಮಾಡಿಕೊಳ್ಳುವ ಇಚ್ಛೆಯೂ ಅವನಲ್ಲಿದ್ದಿಲ್ಲ. ಅವನು ಶುದ್ಧ ದ್ವಿಪಾದ ಪಶುವಿನಂತಿದ್ದನು. ಅವನು ತನಗೆ ಪರಮಾತ್ಮ ಸಾಕ್ಷಾತ್ಕಾರವಾಗಲಿಕ್ಕೆ ಏನು ಮಾಡಬೇಕು, ತಾನು ಹೇಗೆ ಮುಕ್ತನಾಗಬಹುದು ಎಂದು ನನಗೆ ಕೇಳಿದನು. "ನಿನಗೆ ಸುಳ್ಳು ಹೇಳಲಿಕ್ಕೆ ಬರುವುದೋ?" ಎಂದು ನಾನು ಕೇಳಿದೆ. ಇಲ್ಲವೆಂದು ಅವನು ಉತ್ತರ ಕೊಟ್ಟನು. "ಹಾಗಾದರೆ ನೀನು ಅದನ್ನು ಮೊದಲು ಕಲಿಯಬೇಕು. ಶುದ್ಧ ಪಶುವಿನಂತಿರುವುದಕ್ಕಿಂತಲೂ, ಕಲ್ಲಿನಂತೆ ಅಥವಾ ಮರದ ತುಂಡಿನಂತೆ ನಿಶ್ಚೇಷ್ಟನೂ ನಿಷ್ಕ್ರಿಯನೂ ಆಗಿರುವುದಕ್ಕಿಂತಲೂ ನೀನು ಸುಳ್ಳು ಹೇಳುವುದು ಸಾವಿರ ಪಾಲಿಗೆ ಮೇಲು. ಎಲ್ಲ ಕರ್ಮಗಳನ್ನೂ ದಾಟಿ ಪಾರಾಗಿ ನಿಂತ ಆ ಶಾಂತವೂ ಗಂಭೀರವೂ ಆದ ಅತ್ಯುಚ್ಚ ಸ್ಥಿತಿಯನ್ನು ನೀನಿನ್ನೂ ಪಡೆದಿಲ್ಲ. ಯಾವುದೊಂದು ಕೆಟ್ಟ ಕಾರ್ಯವನ್ನು ಮಾಡುವಷ್ಟು ಕೂಡ ಚೈತನ್ಯವು ನಿನ್ನಲ್ಲಿಲ್ಲ" ಎಂದು ನಾನು ಅವನಿಗೆ ಉತ್ತರ ಕೊಟ್ಟೆ. ಈ ದೃಷ್ಟಾಂತವು ಅಪವಾದಾತ್ಮಕವೂ ಕ್ವಚಿತ್ತಾಗಿ

ಕಂಡುಬರುವಂತಹದೂ ಇರುವುದೇನೋ ನಿಜ! ನಾನಾದರೂ ಹೀಗೆ ಹೇಳಿದ್ದು ಚೇಷ್ಟೆಗಾಗಿ. ಆದರೆ ಸಂಪೂರ್ಣ ಶಾಂತಿಯನ್ನು ಹೊಂದಬೇಕಾದರೆ ಸತತ ಕಾರ್ಯತತ್ಪರತೆಯೆಂಬ ಅವಸ್ಥೆಯೊಳಗಿಂದ ದಾಟಿಹೋಗಲಿಕ್ಕೆ ಬೇಕು.

ನಿಷ್ಕ್ರಿಯತೆಯು ಸರ್ವಥಾ ವರ್ಜ್ಯ. ಇನ್ನು ಕಾರ್ಯತತ್ಪರನಾಗಿರಬೇಕಾದರೆ ಪ್ರತಿಕಾರವು ಅತ್ಯವಶ್ಯ. ಮಾನಸಿಕವಾಗಲಿ ಶಾರೀರಿಕವಾಗಲಿ ಅಂಥ ಅನ್ಯಾಯಗಳನ್ನು ಪ್ರತಿಕರಿಸಲೇಬೇಕು. ಈ ಪ್ರತಿಕಾರ ಕಾರ್ಯದಲ್ಲಿ ನೀನು ಯಶಸ್ವಿಯಾದ ಮೇಲೆ ಶಾಂತಿಯು ಹುಟ್ಟುವುದು. "ಯಾರನ್ನೂ ದ್ವೇಷಿಸಬೇಡ, ಅನ್ಯಾಯವನ್ನೂ ಅಸತ್ಯವನ್ನೂ ಪ್ರತಿಕರಿಸಬೇಡ" ಎಂದು ಬಾಯಿಂದ ಹೇಳುವುದೇನೋ ಬಲು ಸುಲಭ. ಆದರೆ ಸಾಮಾನ್ಯ ಜನರು ಅದನ್ನು ಆಚರಿಸತೊಡಗಿದರೆ ಎಂಥ ಅನರ್ಥವುಂಟಾಗುವುದೆಂಬುದನ್ನು ನಾವು ಅರಿತುಕೊಳ್ಳಬೇಕು. ಸಮಾಜದ ಜನರೆಲ್ಲರೂ ನಮ್ಮ ಕಡೆಗೆ ನೋಡುತ್ತಿರುವಾಗ ಕೆಲವು ವೇಳೆ ಬಹಿರಂಗದಲ್ಲಿ ತೋರಿಕೆಗಾಗಿ ಅಪ್ರತಿಕಾರದ ಪ್ರದರ್ಶನವನ್ನು ನಾವು ಮಾಡಬಹುದು. ಆದರೆ ಆ ಕಾಲದಲ್ಲೆಲ್ಲ ನಮ್ಮ ಹೊಟ್ಟೆಯಲ್ಲಿ, ಅಂತರಂಗದಲ್ಲಿ ಎಂಥ ನೋವು ಉಂಟಾಗುವುದೆಂದು ಯಾರು ಹೇಳಬಲ್ಲರು? ಆಗ ಅಪ್ರತಿಕಾರದಿಂದುಂಟಾಗುವ ಶಾಂತಿಯು ನಮ್ಮಲ್ಲಿ ಕಾಣಲು ಕೂಡ ಸಿಗುವುದಿಲ್ಲವೆಂದು ನಮಗೆ ಸ್ಪಷ್ಟ ತಿಳಿದುಬರುತ್ತದೆ. ಅಪಾರ ಸಂಪತ್ತನ್ನು ಗಳಿಸುವ ಇಚ್ಛೆ ಕೇವಲ ದುಷ್ಟತನದ್ದೆಂದು ಇಡೀ ಜಗತ್ತು ತಿಳಿದಿರುವುದೆಂಬುದು ನಿನಗೆ ಗೊತ್ತಿದ್ದರೆ, ನೀನು ಸಂಪತ್ತನ್ನು ಗಳಿಸುವ ಹೋರಾಟದಲ್ಲಿ ದುಮುಕಲಿಕ್ಕಿಲ್ಲ. ಆದರೂ ನಿನ್ನ ಮನಸ್ಸು ಅಂತರಂಗದಲ್ಲಿ ಹಗಲಿರುಳೂ ಸಂಪತ್ತಿನ ಅನುಸಂಧಾನವನ್ನೇ ಮಾಡುತ್ತಿರುವುದು. ಇದಕ್ಕೆ ಡಂಭಾಚಾರವೆಂದೆನ್ನುವರು. ಅದರಿಂದ ಏನೂ ಪ್ರಯೋಜನವಿಲ್ಲ. ಪ್ರಚಂಡ ವ್ಯವಹಾರಗಳಲ್ಲಿ ಮೊದಲು ದುಮುಕಿ, ಅವರೊಳಗಿನ ಸುಖದುಃಖಗಳನ್ನು ಕೆಲವು ಕಾಲ ಉಂಡು ಅನೇಕಾನೇಕ ಅನುಭವಗಳನ್ನು ಪಡೆದಮೇಲೆ ನಿಜವಾದ ಶಾಂತಿ ಉಂಟಾಗುವುದು. ಸಂಪತ್ತು, ಅಧಿಕಾರ ಮೊದಲಾದವುಗಳ ಬಗೆಗೆ ನಿನಗಿದ್ದ ಇಚ್ಛೆಗಳನ್ನು ಮೊದಲು ತೃಪ್ತಿಪಡಿಸಿಕೊಂಡ ಮೇಲೆ ಅವೆಲ್ಲ ಕ್ಷುದ್ರ ವಸ್ತುಗಳೆಂದೂ, ಅಪೇಕ್ಷಿಸಲು ಯೋಗ್ಯವಾದವುಗಳಲ್ಲವೆಂದೂ ನಿನಗೆ

ತಾನಾಗಿ ಪ್ರತೀತಿಯಾಗುವುದು. ಆದರೆ ಆ ಹೋರಾಟದೊಳಗಿಂದ ದಾಟಿ ಹೋಗುವತನಕ, ಇಚ್ಛೆಗಳು ತೃಪ್ತವಾಗುವ ತನಕ ಆ ಶಾಂತಿ ಸಮಾಧಾನ ಗಳೂ ಆ ಈಶ್ವರಪ್ರಣಿಪಾತ ಬುದ್ಧಿಯೂ ದೊರಕುವುದು ದುರ್ಲಭ. ಈಗ ಸಾವಿರಾರು ವರ್ಷಗಳಿಂದ ಶಾಂತಿ, ಸಮಾಧಾನ, ವೈರಾಗ್ಯ ವಿಚಾರಗಳು ಜನರಿಗೆ ಉಪದೇಶಿಸಲ್ಪಡುತ್ತ ಬಂದಿರುತ್ತವೆ. ಚಿಕ್ಕಂದಿನಿಂದಲೂ ಪ್ರತಿ ಯೊಬ್ಬನೂ ಈ ವಿಚಾರಗಳನ್ನು ಕೇಳುತ್ತ ಬಂದಿರುತ್ತಾನೆ. ಆದರೂ ಪ್ರಪಂಚದೊಳಗಿನ ಸ್ವಲ್ಪ ಜನರು ಮಾತ್ರ ಈ ಸ್ಥಿತಿಯನ್ನು ಹೊಂದಿರುವ ರೆಂಬುದು ಪ್ರತ್ಯಕ್ಷ ಕಾಣುವ ಮಾತು. ನಾನು ಇಡೀ ಅರ್ಧ ಪ್ರಪಂಚದ ಭಾಗವನ್ನೆಲ್ಲ ಸುತ್ತಿಕೊಂಡು ಬಂದಿದ್ದರೂ, ನಿಜವಾಗಿ ಶಾಂತರೂ ಸಮಾ ಧಾನಿಗಳೂ ಅಪ್ರತಿಕಾರಕ್ಕೆ ಯೋಗ್ಯರೂ ಆದ ಇಪ್ಪತ್ತು ಜನರನ್ನಾದರೂ ಕಂಡಿರುವೆನೆಂದು ಹೇಳಲಾರೆನು.

ಪ್ರತಿಯೊಬ್ಬನೂ ತನ್ನ ಗುರಿಯನ್ನು ಗೊತ್ತುಪಡಿಸಿಕೊಂಡು ಅದನ್ನು ಸಾಧಿಸಲಿಕ್ಕೆ ಯತ್ನಿಸುತ್ತಿರಬೇಕು. ಇದೇ ನಿಜವಾದ ಪ್ರಗತಿಯ ಮಾರ್ಗ. ಪ್ರಾಪ್ತಮಾಡಿಕೊಳ್ಳಲು ಅಶಕ್ಯವಾದ ಮತ್ತು ಅನ್ಯ ಜನರಿಗೆ ಯೋಗ್ಯವಾದ ಗುರಿಗಳನ್ನಿಟ್ಟುಕೊಂಡು ತೊಂದರೆಪಡುವುದರಲ್ಲಿ ಏನೂ ಪ್ರಯೋಜನವಿಲ್ಲ. ಒಂದು ಚಿಕ್ಕ ಮಗುವಿಗೆ ಒಮ್ಮೆಲೆ ೨೦ ಮೈಲು ನಡೆಯುವ ಕೆಲಸವನ್ನು ಕೊಡೋಣ. ಆದರಿಂದ ಆ ಕೂಸು ಸತ್ತು ಹೋಗುವುದು, ಅಥವಾ ಸಾವಿರ ಮಕ್ಕಳಲ್ಲಿ ಒಂದು ಮಗು ಆ ೨೦ ಮೈಲುಗಳನ್ನು ಕಾಲು ಹೊಸೆಯುತ್ತ ಹೋದರೂ ದಣಿದು ನಿತ್ರಾಣವಾಗಿ ಅರ್ಧಮರ್ಧ ಮೃತಪ್ರಾಯವಾಗಿಯೇ ಮುಟ್ಟುವುದು. ಪ್ರಪಂಚದ ವ್ಯವಹಾರದಲ್ಲಿಯೂ ನಾವು ಹೀಗೆಯೇ ಮಾಡಲು ಯತ್ನಿಸುತ್ತೇವೆ. ಯಾವ ಸಮಾಜದಲ್ಲಿಯೂ ಎಲ್ಲ ಸ್ತ್ರೀಪುರುಷ ರಿಗೂ ಒಂದೇ ತರದ ಮನಸ್ಸು, ಒಂದೇ ತರದ ಸಾಮರ್ಥ್ಯ, ಅಷ್ಟೇ ಕ್ರಿಯಾಶಕ್ತಿ ಇರುವವೆಂದು ಹೇಳಲಾಗದು. ತಮ್ಮ ಮನಸ್ಸಿನ ಒಲವು, ಶಕ್ತಿ ಸಾಮರ್ಥ್ಯಗಳಿಗನುಸರಿಸಿ ಭಿನ್ನ ಭಿನ್ನ ಧ್ಯೇಯಗಳನ್ನಿಟ್ಟುಕೊಳ್ಳಲೇ ಬೇಕು. ಯಾವ ಧ್ಯೇಯವನ್ನೂ ಅದು ಎಂತಹದಿದ್ದರೂ ದೂಷಿಸಕೂಡದು. ಪ್ರತಿಯೊಬ್ಬನೂ ತನ್ನ ಸ್ವಂತ ಧ್ಯೇಯವನ್ನು ಸಂಪಾದಿಸುವುದರಲ್ಲಿ ತೊಡ ಗಲಿ! ನಿನ್ನ ಧ್ಯೇಯದ ದೃಷ್ಟಿಯಿಂದ ನನ್ನನ್ನೂ ನನ್ನ ಧ್ಯೇಯದ ದೃಷ್ಟಿ ಯಿಂದ ನಿನ್ನನ್ನೂ ಪರೀಕ್ಷಿಸುವುದು ಯೋಗ್ಯವಲ್ಲ. ಕತ್ತೆಯಷ್ಟು ಭಾರ

ಹೊರಲಾರದೆಂದು ಕುದುರೆಯನ್ನೂ, ಕುದುರೆಯಷ್ಟು ಬೇಗ ನಡೆಯಲಾರ ದೆಂದು ಕತ್ತೆಯನ್ನೂ ನಾವು ದೂಷಿಸಿದರೆ ಸರಿ ಕಾಣದು. ಅದರ ಯೋಗ್ಯತೆ ಅದಕ್ಕೆ.

ಈ ವೈವಿಧ್ಯದಲ್ಲಿಯೂ ಒಂದು ತರದ ಐಕ್ಯಭಾವವು ಇರಬೇಕೆಂದು ಸೃಷ್ಟಿಯ ನಿಯಮವಿರುತ್ತದೆ. ಸ್ತ್ರೀಪುರುಷರೆಲ್ಲರೂ ಒಬ್ಬರಿಂದೊಬ್ಬರು ಭಿನ್ನರಾಗಿದ್ದರೂ ಒಂದು ತರದ ಐಕ್ಯವು ಇದ್ದದ್ದು ಕಂಡುಬರುವುದು. ಭಿನ್ನ ಭಿನ್ನ ವೈಯಕ್ತಿಕ ಸ್ವಭಾವ ಗುಣಗಳೂ ಸ್ತ್ರೀಪುರುಷರಲ್ಲಿಯ ವಿವಿಧ ವರ್ಗಗಳೂ ಸೃಷ್ಟಿಯಲ್ಲಿಯ ವೈವಿಧ್ಯವನ್ನು ಸೂಚಿಸುತ್ತವೆ. ಆದ್ದರಿಂದ ಅವರೆಲ್ಲರನ್ನೂ ಒಂದೇ ಒರೆಗೆ ಹಚ್ಚಿ ಪರೀಕ್ಷಿಸಬಾರದು. ಅವರೆಲ್ಲರೆದುರಿಗೆ ಒಂದೇ ಗುರಿಯನ್ನೂ ಇಡಬಾರದು. ಒಂದು ವೇಳೆ ಹೀಗೆ ಮಾಡಿದರೆ, ನಿಸರ್ಗವಿರುದ್ಧವಾದ ಗುದ್ದಾಟವು ಮಾತ್ರ ನಡೆಯುವುದು. ಅದರ ಪರಿಣಾಮದಿಂದ ಮನುಷ್ಯನು ತನ್ನನ್ನು ತಾನೇ ತಿರಸ್ಕರಿಸತೊಡಗಿ ಧಾರ್ಮಿಕನೂ ಸಜ್ಜನನೂ ಆಗಿರಲು ಒಲ್ಲೆನೆನ್ನುವನು. ಪ್ರತಿಯೊಬ್ಬನು ತನಗೆ ಶಕ್ಯವಿದ್ದಷ್ಟು ಮಾತ್ರ ಉಚ್ಚ ಧ್ಯೇಯವನ್ನು ಎದುರಿಗಿಟ್ಟುಕೊಂಡು ಹೋರಾಡಬೇಕು. ಮತ್ತು ಆ ಧ್ಯೇಯವನ್ನು ಮುಂದೆ ಮುಂದೆ ಸರಿಸುತ್ತ ಸತ್ಯದೆಡೆಗೆ ಒಯ್ದು ಮುಟ್ಟಿಸಬೇಕು. ಇದೇ ನಮ್ಮ ಕರ್ತವ್ಯ.

ಹಿಂದೂ ತತ್ವಜ್ಞಾನಿಗಳು ಈ ಸಂಗತಿಯನ್ನು ಕಂಡುಹಿಡಿದು ಬಹಳ ವರ್ಷಗಳಾದವು. ಅವರ ಶಾಸ್ತ್ರಗ್ರಂಥಗಳಲ್ಲಿಯೂ ನೀತಿಗ್ರಂಥಗಳಲ್ಲಿಯೂ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಎಂಬ ನಾಲ್ಕು ಬೇರೆ ಬೇರೆ ನಿಯಮಗಳನ್ನು ಹಾಕಿಕೊಟ್ಟಿರುತ್ತಾರೆ. ಸರ್ವಸಾಮಾನ್ಯ ಮನುಷ್ಯಜಾತಿಗೆ ಉಕ್ತವಾದಂಥ ಕರ್ತವ್ಯಗಳಲ್ಲದೆ ಪ್ರತಿಯೊಬ್ಬ ವ್ಯಕ್ತಿಯು ತನ್ನ ಆಶ್ರಮ ಧರ್ಮಕ್ಕನುಸರಿಸಿ ಕೆಲವು ಕರ್ತ್ತವ್ಯಗಳನ್ನು ಮಾಡಬೇಕಾಗುವುದು. ಮೊದಲು ಬ್ರಹ್ಮಚರ್ಯಾಶ್ರಮವು ಆರಂಭವಾಗುತ್ತದೆ. ಆ ಮೇಲೆ ಮನುಷ್ಯನು ಲಗ್ನವಾಗಿ ಗೃಹಸ್ಥಾಶ್ರಮಿಯಾಗುತ್ತಾನೆ. ವಾನಪ್ರಸ್ಥಾಶ್ರಮದಲ್ಲಿ ಸಂಸಾರದ ವಿಷಯದಲ್ಲಿ ವಿರಕ್ತನಾಗುತ್ತಾನೆ. ಕೊನೆಗೆ ಸರ್ವಸಂಗ ಪರಿತ್ಯಾಗ ಮಾಡಿ ಸನ್ಯಾಸಾಶ್ರಮವನ್ನು ಸ್ವೀಕರಿಸುತ್ತಾನೆ. ಈ ಪ್ರತಿಯೊಂದು ಆಶ್ರಮಕ್ಕೂ ಬೇರೆ ಬೇರೆ ಧರ್ಮ ಅಥವಾ ಕರ್ತವ್ಯಗಳನ್ನು ಹೇಳಿರುತ್ತಾರೆ. ಈ ಆಶ್ರಮಾವಸ್ಥೆಗಳಲ್ಲಿ ಮೇಲುಕೀಳೆಂಬ ಕಲ್ಪನೆಯಿಲ್ಲ. ಇಂಥ ಆಶ್ರಮವು

ದೊಡ್ಡದು, ಇಂಥ ಆಶ್ರಮವು ಸಣ್ಣದು ಎಂಬ ಭೇದವಿಲ್ಲ. ಆಜನ್ಮ ಬ್ರಹ್ಮಚಾರಿಯಾಗಿದ್ದು ಧರ್ಮಕಾರ್ಯಕ್ಕೆ ತನ್ನ ಆಯುಷ್ಯವನ್ನೇ ಧಾರೆ ಎರೆದವನೂ ವಿವಾಹ ಮಾಡಿಕೊಂಡು ಗೃಹಸ್ಥಾಶ್ರಮಿಯಾಗಿ ಜೀವಿಸು ವವನೂ ಇಬ್ಬರೂ ಸರಿಸಮಾನರೆಂದು ತಿಳಿಯಬೇಕು. ರಾಜಸಿಂಹಾಸನದ ಮೇಲೆ ಕುಳಿತ ಅಧಿಪತಿಯೂ, ಬೀದಿಯಲ್ಲಿ ಕಸಗೂಡಿಸುವವನೂ, ಅಷ್ಟೇ ದೊಡ್ಡವರೂ ಅಷ್ಟೇ ಪೂಜ್ಯರೂ ಎಂಬುದನ್ನು ಲಕ್ಷ್ಯದಲ್ಲಿಡಬೇಕು. ಅರಸನನ್ನು ಸಿಂಹಾಸನದಿಂದ ಕೆಳಗಿಳಿಸಿ ಬೀದಿಯ ಕಸಗೂಡಿಸಲು ಹೇಳಿರಿ; ಆಗ ಅವನ ಸ್ಥಿತಿಯೇನಾಗುವುದೆಂಬುದು ಗೊತ್ತಾಗುವುದು. ಕಸ ಗೂಡಿಸುವವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ ಅವನು ಹೇಗೆ ಆಳುವ ನೆಂಬುದನ್ನು ನೋಡಿರಿ. ಸಂಸಾರಿಗನಿಗಿಂತಲೂ ಸಂಸಾರವನ್ನು ತ್ಯಾಗ ಮಾಡಿದವನು ಹೆಚ್ಚಿನವನೆಂದು ಹೇಳುವುದು ವ್ಯರ್ಥ. ಸಂಸಾರ ಪರಿತ್ಯಾಗ ಮಾಡಿ ಎಲ್ಲ ಉಪಾಧಿಯನ್ನು ತೊರೆದು ಅನಾಯಾಸವಾಗಿ ಸ್ವತಂತ್ರನಾಗಿ ಜೀವಿಸುವುದಕ್ಕಿಂತ ಸಂಸಾರದಲ್ಲಿದ್ದು ಈಶ್ವರೋಪಾಸನೆಯನ್ನು ಆಚರಿಸು ವುದು ಬಹಳ ಕಠಿಣ. ಹಿಂದೂ ಸಮಾಜದಲ್ಲಿ ಕ್ರಮೇಣ ಈ ನಾಲ್ಕು ಆಶ್ರಮಗಳು ಲೋಪಹೊಂದಿ, ಗೃಹಸ್ಥಾಶ್ರಮ ಮತ್ತು ಸನ್ಯಾಸಾಶ್ರಮ ಎಂಬೆರಡೇ ಅವಸ್ಥಾಭೇದಗಳು ಉಳಿದುಕೊಂಡವು. ಗೃಹಸ್ಥಾಶ್ರಮಿಯು ವಿವಾಹಿತನಾಗಿ ಸಮಾಜಸಂಬಂಧವಾದ ತನ್ನ ಕರ್ತವ್ಯಗಳನ್ನು ನೆರವೇರಿಸು ತ್ತಾನೆ. ಸನ್ಯಾಸಾಶ್ರಮಿಯ ಕರ್ತವ್ಯವು ತನ್ನ ಶಕ್ತಿಸರ್ವಸ್ವವನ್ನೆಲ್ಲ ವೆಚ್ಚ ಮಾಡಿ ಧರ್ಮವನ್ನೂ ಈಶ್ವರೋಪಾಸನೆಯನ್ನೂ ಸ್ವತಃ ಆಚರಿಸುವುದು ಮತ್ತು ಸಮಾಜಕ್ಕೆ ಉಪದೇಶಿಸುವುದು. ಇದೇ ವಿಷಯವನ್ನು ಪ್ರತಿ ಪಾದಿಸುವ 'ಮಹಾನಿರ್ವಾಣತಂತ್ರ'ವೆಂಬ ಗ್ರಂಥದಿಂದ ಕೆಲವು ಭಾಗ ಗಳನ್ನು ನಿಮಗೆ ಓದಿ ತೋರಿಸುತ್ತೇನೆ. ಅದರಿಂದ, ಗೃಹಸ್ಥಾಶ್ರಮಿಯಾಗಿ ತನ್ನ ಕರ್ತವ್ಯಗಳನ್ನೆಲ್ಲ ಅಚ್ಚುಕಟ್ಟಾಗಿ ಕೊರತೆಯಿಲ್ಲದೆ ಸಾಗಿಸಿಕೊಂಡು ಹೋಗುವುದು ಅತಿಶಯ ಕಠಿಣವೆಂದು ನಿಮಗೆ ಕಂಡುಬರದೆ ಇರಲಾರದು.

ಗೃಹಸ್ಥಾಶ್ರಮಿ ಈಶ್ವರೋಪಾಸನೆಯಲ್ಲಿ ತತ್ಪರನಾಗಿರಬೇಕು. ಆ ಬ್ರಹ್ಮಜ್ಞಾನವೇ ಅವನ ಜೀವನದ ಗೊತ್ತುಗುರಿ. ಆದರೂ ಅವನು ಸತತ ಕಾರ್ಯತತ್ಪರನಾಗಿ ತನ್ನ ಕರ್ತವ್ಯಗಳನ್ನೆಲ್ಲ ಜರುಗಿಸಬೇಕು; ತನ್ನ ಕರ್ಮ ಗಳ ಫಲಗಳನ್ನು ಮಾತ್ರ ದೇವರಿಗೆ ಅರ್ಪಿಸಬೇಕು. ಕಾರ್ಯ ಮಾಡಿಯೂ

ಫಲದಾಶೆಯನ್ನು ಬಿಡುವುದು, ಒಬ್ಬನಿಗೆ ಸಹಾಯ ಮಾಡಿಯೂ ಅವನು ನಮಗೆ ಕೃತಜ್ಞತೆಯನ್ನು ತೋರಿಸಬೇಕೆಂಬ ಅಪೇಕ್ಷೆಯನ್ನು ತೊರೆಯುವುದು, ಯಾವುದೊಂದು ಸತ್ಕಾರ್ಯವನ್ನು ಮಾಡಿಯೂ ಅದರಿಂದ ನಮಗೆ ಒಳ್ಳೇ ಹೆಸರಾಗಲಿ ಕೀರ್ತಿಯಾಗಲಿ ಮತ್ತೇನಾದರೂ ಆಗಲಿ ದೊರಕುವುದೆಂದು ನಿರೀಕ್ಷಿಸದೆ ಇರುವುದು ಇವೆಲ್ಲ ಈ ಪ್ರಪಂಚದಲ್ಲಿ ಆಚರಿಸಲು ಅತಿಶಯ ಕಠಿಣವಾದ ವಿಷಯುಗಳು. ಒಬ್ಬ ಕ್ಷುದ್ರ ರಣಹೇಡಿಯ ಬೆನ್ನು ಚಪ್ಪರಿಸಿ ಹೊಗಳಿದರೆ ಅವನು ಕೂಡ ಶೂರನಾಗುವನು. ಇಡೀ ಸಮಾಜವೇ ತನ್ನನ್ನು ಸನ್ಮಾನಿಸುತ್ತದೆಂದು ತಿಳಿದರೆ ಒಬ್ಬ ಮೂರ್ಖನು ಕೂಡ ಧೀರೋದಾತ್ತ ಕಾರ್ಯ ಮಾಡಲು ಪ್ರವೃತ್ತನಾಗುವನು. ಆದರೆ ತನ್ನ ಬಂಧುಬಾಂಧವರಿಂದ ಸ್ತುತಿಸ್ತೋತ್ರಗಳನ್ನೂ ಸನ್ಮಾನವನ್ನೂ ಅಪೇಕ್ಷಿಸದೆ ಅವು ದೊರಕದಿದ್ದರೂ ಲೆಕ್ಕಿಸದೆ ಸತತವಾಗಿ ಸತ್ಕಾರ್ಯ ಪ್ರವೃತ್ತನಾಗುವುದು ಎಲ್ಲಕ್ಕೂ ಹೆಚ್ಚಿನ ಯಜ್ಞ, ಸ್ವಾರ್ಥತ್ಯಾಗ, ಎನ್ನಬೇಕು. ಗೃಹಸ್ಥಾಶ್ರಮಿಯ ಮುಖ್ಯ ಕರ್ತವ್ಯವೆಂದರೆ ತನ್ನ ಉಪಜೀವನದ ಮಾರ್ಗವನ್ನು ಕಂಡುಕೊಳ್ಳುವುದು. ಇದನ್ನು ಕೂಡ ಸುಳ್ಳು ಹೇಳಿ, ಮೋಸ ಮಾಡಿ ಅಥವಾ ಅನ್ಯರನ್ನು ಸುಲಿದು ಸಾಗಿಸಬಾರದೆಂಬುದನ್ನು ನೆನಪಿನಲ್ಲಿಟ್ಟಿರಬೇಕು. ತನ್ನ ಜೀವಿತವೆಲ್ಲವೂ ಈಶ್ವರನ ಸೇವೆಗಾಗಿಯೂ ದರಿದ್ರ ನಾರಾಯಣನ ಸೇವೆಗಾಗಿಯೂ ಮೀಸಲಾಗಿರುವದೆಂದು
ಶ್ರಮಿಯು ಅರಿತಿರಲೇಬೇಕು.

ತಾಯಿತಂದೆಗಳು ನಮ್ಮ ಸಾಧನ ಸೌಕರ್ಯಕ್ಕಾಗಿ ಭೂಮಿಯ ಮೇಲೆ ಅವತರಿಸಿದ ಪ್ರತ್ಯಕ್ಷ ಮೂರ್ತಿಮಂತ ದೇವತೆಗಳೆಂದು ತಿಳಿದು ಗೃಹಸ್ಥನು ಯಾವಾಗಲೂ ಎಲ್ಲ ರೀತಿಯಿಂದಲೂ ಅವರನ್ನು ಸಂತೋಷಗೊಳಿಸಬೇಕು. ತಾಯಿತಂದೆಗಳು ಸಂತುಷ್ಟರಾದರೆ ದೇವರು ಅವನ ಮೇಲೆ ಸಂಪ್ರೀತನಾಗುತ್ತಾನೆ. ತಾಯಿತಂದೆಗಳಿಗೆ ಬಿರುನುಡಿಗಳನ್ನು ಎಂದೂ ಆಡದ ಮಗನೇ ನಿಜವಾದ ಸತ್ಪುತ್ರನು. ತಾಯಿತಂದೆಗಳೆದುರಿಗೆ ಚೇಷ್ಟೆಮಾಡಬಾರದು, ಅಸಮಾಧಾನವನ್ನೂ ಚಿತ್ತಚಾಪಲ್ಯವನ್ನೂ ಕೋಪವನ್ನೂ ತೋರ್ಪಡಿಸಬಾರದು. ತಾಯಿತಂದೆಗಳು. ಹೆಂಡತಿಮಕ್ಕಳು, ಮತ್ತು ಬಡಬಗ್ಗರ ಹೊಟ್ಟೆಬಟ್ಟೆಯ ಪೂರೈಕೆಯನ್ನು ಮಾಡದೆ ಯಾವನೊಬ್ಬ ಗೃಹಸ್ಥನು ತನ್ನದನ್ನೇ ನೋಡಿಕೊಂಡರೆ ಅವನು ಪಾಪಮಾಡಿದಂತೆ

ಆಗುತ್ತದೆ. ತನಗೆ ದೇಹವನ್ನು ಮೊದಲು ಕೊಟ್ಟವರು ತಾಯಿತಂದೆಗಳಾದ್ದರಿಂದ ಅವರ ಹಿತಕ್ಕಾಗಿ ನೂರಾರು ಕಷ್ಟಗಳನ್ನಾದರೂ ಸಹಿಸಬೇಕು.

ಗೃಹಸ್ಥನು ತನ್ನ ಧರ್ಮಪತ್ನಿಯ ವಿಷಯದಲ್ಲಿ ನೆರವೇರಿಸತಕ್ಕ ಕೆಲವು ಕರ್ತವ್ಯಗಳೂ ಇರುವವು. ಹೆಂಡತಿಯನ್ನು ಹಳಿಯದೆ ಬೈಯದೆ ತಾಯಿಯಂತೆ ಯಾವಾಗಲೂ ಸಂರಕ್ಷಿಸಬೇಕು. ತಾನು ಅನೇಕ ಕಷ್ಟಗಳಲ್ಲಿ, ತೊಂದರೆಗಳಲ್ಲಿ ಸಿಲುಕಿಕೊಂಡಿದ್ದರೂ ಹೆಂಡತಿಯ ಮೇಲೆ ರೇಗಬಾರದು. ತನ್ನ ಪತ್ನಿಯನ್ನುಳಿದು ಪರಸ್ತ್ರೀಯರನ್ನು ಸ್ಮರಿಸಿದರೆ, ಅವರನ್ನು ಮನಸ್ಸಿನಿಂದ ಮುಟ್ಟಿದರೆ ಕೂಡ, ಆ ಮನುಷ್ಯನು ಘೋರ ನರಕವಾಸವನ್ನು ಹೊಂದುವನು. ಸ್ತ್ರೀಯರೆದುರಿಗೆ ಅಶ್ಲೀಲ ಭಾಷೆಯನ್ನು ನುಡಿಯಬಾರದು. ತನ್ನ ಶಕ್ತಿಸಾಮರ್ಥ್ಯಗಳನ್ನು ಹೊಗಳಿಕೊಳ್ಳಬಾರದು. 'ಇದನ್ನು ಮಾಡಿದ್ದು ನಾನು, ಅದನ್ನು ಮಾಡಿದ್ದೂ ನಾನೇ' ಎಂದು ಹೆಮ್ಮೆ ತೋರಿಸಬಾರದು. ಗೃಹಸ್ಥನು ತನ್ನ ಪತ್ನಿಗೆ ಧನವಸ್ತ್ರಗಳನ್ನು ಕೊಟ್ಟು ಪ್ರೀತಿ ವಿಶ್ವಾಸಗಳನ್ನು ತೋರಿಸಿ ಆಕೆಯ ಮನಸ್ಸು ಎಂದೂ ಉದ್ವಿಗ್ನವಾಗದಂತೆ ಅಮೃತವಂಥ ಸವಿಮಾತುಗಳನ್ನಾಡುತ್ತಿರಬೇಕು. ಪತಿವ್ರತಾಶಿರೋಮಣಿಯಾದ ತನ್ನ ಧರ್ಮಪತ್ನಿಯ ಪ್ರೇಮವನ್ನು ಸಂಪಾದಿಸಿದ ಗೃಹಸ್ಥನು ಧರ್ಮ ಪರಾಯಣತೆಯಲ್ಲಿ ಜಯಶೀಲನಾದಂತಾಯಿತು. ಅವನೇ ಸರ್ವ ವಿಧದಿಂದಲೂ ಸದ್ಗುಣ ಪರಿಪೂರ್ಣನೆಂದು ಹೇಳಬಹುದು.

ಅದರಂತೆ ಮಕ್ಕಳ ವಿಷಯದಲ್ಲಿ ಪಾಲಿಸತಕ್ಕ ಕೆಲವು ಕರ್ತವ್ಯಗಳೂ ಇರುವವು. ಮಗನು ನಾಲ್ಕು ವರ್ಷದವನಾಗುವವರೆಗೆ ಅವನನ್ನು ಪ್ರೇಮದಿಂದ ಸಾಕಿ ಸಲುಹಬೇಕು. ಮುಂದೆ ಹದಿನಾರು ವರ್ಷಗಳಾಗುವ ತನಕ ಅವನಿಗೆ ಶಿಕ್ಷಣವನ್ನು ಕೊಡಬೇಕು. ಇಪ್ಪತ್ತು ವರ್ಷದವನಾದ ಮೇಲೆ ಅವನನ್ನು ಯಾವುದೊಂದು ಉದ್ಯೋಗದಲ್ಲಿ ತೊಡಗಿಸಬೇಕು. ಆ ಮೇಲೆ ತಂದೆಯು ಅವನನ್ನು ಸರಿಸಮಾನಸ್ಕಂದನೆಂದು ತಿಳಿದು ಅವನ ಕೂಡ ಪ್ರೇಮದಿಂದ ವರ್ತಿಸಬೇಕು. ಅದರಂತೆ ಮಗಳನ್ನಾದರೂ ಪ್ರೇಮದಿಂದ ಸಾಕಿ ಸಲುಹಿ ಅತ್ಯಂತ ಪರಿಶ್ರಮಪೂರ್ವಕವಾಗಿ ಶಿಕ್ಷಣವನ್ನು ಪೂರೈಸಬೇಕು. ಆಕೆಯ ಮದುವೆಯನ್ನು ಮಾಡಿ ಆ ಕಾಲಕ್ಕೆ ಆಭರಣಗಳನ್ನೂ ಧನವನ್ನೂ ಮುತ್ತುರತ್ನಗಳನ್ನೂ ಆಕೆಗೆ ಕೊಡತಕ್ಕದ್ದು. ಆ ಮೇಲೆ ಗೃಹಸ್ಥನು ತನ್ನ ಅಣ್ಣತಮ್ಮಂದಿರು, ಅಕ್ಕತಂಗಿಯರು, ನಿರ್ಧನರಾದ ಅಣ್ಣ

ತಮ್ಮಂದಿರ ತಂಗಿಯರ ಮಕ್ಕಳು ಮತ್ತು ಉಳಿದ ಆಪ್ತೇಷ್ಟರು, ಬಂಧು ಬಳಗ ದವರು, ಮಿತ್ರರು, ಸೇವಕರು ಮೊದಲಾದ ಜನರ ವಿಷಯದಲ್ಲಿ ಮಾಡ ತಕ್ಕ ಕರ್ತವ್ಯಗಳೂ ಇವೆ. ಆ ಮೇಲೆ ತನ್ನ ಹಳ್ಳಿಯ ಬಡವರು, ನಿರಾ ಶ್ರಿತರು, ಸಹಾಯಾರ್ಥವಾಗಿ ಬಂದವರು ಮೊದಲಾದವರ ವಿಷಯದಲ್ಲಿ ಪಾಲಿಸತಕ್ಕ ಕರ್ತವ್ಯಗಳಿವೆ. ತಕ್ಕಷ್ಟು ಅನುಕೂಲತೆಯೂ ಸಾಮರ್ಥ್ಯವೂ ಇದ್ದೂ ತನ್ನ ಆಪ್ತೇಷ್ಟರಿಗೂ ಬಡಬಗ್ಗರಿಗೂ ಸಹಾಯ ಮಾಡದಿದ್ದರೆ, ಆ ಗೃಹಸ್ಥನು ಮನುಷ್ಯನಲ್ಲ, ಶುದ್ಧ ಪಶುವೆಂದು ತಿಳಿಯಬೇಕು.

ಅನ್ನ, ವಸ್ತ್ರ, ದೇಹಸಂರಕ್ಷಣೆ ಇವುಗಳ ವಿಷಯದಲ್ಲಿ ಮಿತಿಮೀರಿದ ಆಸಕ್ತಿಯನ್ನು ತೋರಿಸಬಾರದು. ಕೂದಲು ಬಾಚಿಕೊಳ್ಳುವುದರಲ್ಲಿ ಅತ್ಯಾ ಸಕ್ತಿಯನ್ನು ತೋರೆಯಬೇಕು. ಗೃಹಸ್ಥಾಶ್ರಮಿ ದೇಹಮನಸ್ಸುಗಳನ್ನು ಶುದ್ಧವಾಗಿಟ್ಟುಕೊಂಡು ಸತತೋದ್ಯೋಗನಿರತನಾಗಿರಬೇಕು. ಶತ್ರುಗಳ ಕೂಡ ಧೀರವೀರನಂತೆ ಕಾದಾಡಬೇಕು, ಪ್ರತಿಕಾರ ಮಾಡಬೇಕು. ಅದೇ ಅವನ ಕರ್ತವ್ಯ. ಸುಮ್ಮನೆ ಅಳುಬುರುಕನಂತೆ ಮೂಲೆಯಲ್ಲಿ ಕೈ ಮುದುಡಿಕೊಂಡು ಕುಳಿತು 'ಅಹಿಂಸೆ ಅಪ್ರತಿಕಾರ'ದ ವಿಷಯದಲ್ಲಿ ಹುಚ್ಚುತನದ ದೊಡ್ಡ ದೊಡ್ಡ ಮಾತುಗಳನ್ನಾಡಬಾರದು. ವೈರಿಗಳ ಕೂಡ ಬಂಟನಂತೆ ಕಾದಿದರೆ ಗೃಹಸ್ಥನು ತನ್ನ ಕರ್ತವ್ಯವನ್ನು ಮಾಡಿ ದಂತಾಗಲಿಲ್ಲ. ತನ್ನ ಇಷ್ಟಮಿತ್ರರಿಗೂ ಬಂಧುಬಾಂಧವರಿಗೂ ಆಕಳಿ ನಂತೆ ಸೌಮ್ಯನಾಗಿರಬೇಕು.

ದುಷ್ಟ ಮನುಷ್ಯನಿಗೆ ಸನ್ಮಾನ ಮಾಡದಿರುವುದು ಗೃಹಸ್ಥನ ಪವಿತ್ರ ಕರ್ತವ್ಯ. ಹಾಗೆ ಅಪಾತ್ರದಲ್ಲಿ ಮರ್ಯಾದೆಯನ್ನು ತಾಳುವುದರಿಂದ ದುಷ್ಟತನಕ್ಕೆ ಉತ್ತೇಜನ ಕೊಟ್ಟಂತಾಗುವುದು. ಅದರಂತೆ ಬಹುಮಾನಕ್ಕೆ ಪಾತ್ರರಾದಂಥ ಸತ್ಪುರುಷರನ್ನು ತಿರಸ್ಕರಿಸುವುದೂ ದೊಡ್ಡ ತಪ್ಪು. ತಾನಾಗಿ ಮುಂದುವರಿದು ಹೋಗಿ ಮಿತ್ರತ್ವವನ್ನು ಬೆಳೆಸಲು ಹಾತೊರೆಯ ಬಾರದು. ಮಾಡಬಾರದ್ದನ್ನು ಮಾಡಿಯಾದರೂ ಹೋದ ಹೋದಲ್ಲಿ ಹೊಸ ಮಿತ್ರರನ್ನು ಗಳಿಸಲು ಸಾಹಸಪಡಬಾರದು. ಮೊದಲು ಜನರ ನಡತೆ ನಡಾವಳಿಗಳನ್ನೂ ಆಚರಣೆಯನ್ನೂ ಅನ್ಯ ಜನರ ಕೂಡ ಇದ್ದ ಅವರ ವ್ಯವಹಾರವನ್ನೂ ಪರೀಕ್ಷಿಸಿ ನೋಡಿ ಯೋಚಿಸಿ ಆ ಮೇಲೆ ಗೆಳೆತನ ವನ್ನು ಬೆಳೆಯಿಸಬೇಕು.

ಗೃಹಸ್ಥಾಶ್ರಮಿಯು (೧) ತನ್ನ ಸ್ವಂತ ಕೀರ್ತಿಯನ್ನು ಮಹಾಜನರೆದುರಿಗೆ ಹೊಗಳಿಕೊಳ್ಳಬಾರದು. (೨) ತನ್ನ ಹೆಸರು ಬಿರುದಾವಳಿಗಳನ್ನೂ ತನ್ನ ಪೌರುಷ ಸಾಮರ್ಥ್ಯಗಳನ್ನೂ ಬಾಯಿಬಿಟ್ಟು ಘೋಷಿಸಬಾರದು. (೩) ತನ್ನ ಸಂಪತ್ತಿನ ವಿಷಯವನ್ನೂ ಅನ್ಯರು ತನಗೆ ರಹಸ್ಯವಾಗಿ ಹೇಳಿದ್ದನ್ನೂ ಬಹಿರಂಗವಾಗಿ ನುಡಿಯಬಾರದು. ತಾನು ಬಡವನೆಂದಾಗಲಿ ಶ್ರೀಮಂತನೆಂದಾಗಲಿ ತನ್ನ ವೈಭವಸ್ಥಿತಿಯನ್ನಾಗಲಿ ಹೇಳಿಕೊಳ್ಳಬಾರದು. ತನ್ನದನ್ನು ಬಚ್ಚಿಟ್ಟುಕೊಂಡು ಬುದ್ಧಿವಂತನಾಗಿರುವುದು ಅವನ ಧರ್ಮ. ಇದು ಕೇವಲ ಲೋಕವ್ಯವಹಾರದ ನಿಪುಣತೆಯ ಮಾತಲ್ಲ. ಗೃಹಸ್ಥನು ಹೀಗೆ ಆಚರಿಸದಿದ್ದರೆ ಅವನು ಅನೀತಿವಂತನೆಂದು ಹೇಳಬೇಕಾಗುವುದು.

ಗೃಹಸ್ಥನು ಇಡೀ ಸಮಾಜಕ್ಕೆ ಆಧಾರಸ್ತಂಭನು, ಆಶ್ರಯದಾತನು. ದ್ರವ್ಯಾರ್ಜನೆ ಮಾಡಿ ಸಮಾಜವನ್ನು ಪೋಷಿಸುವ ಭಾರವು ಅವನದು. ಬಡಬಗ್ಗರು, ದುರ್ಬಲರು, ಚಿಕ್ಕಮಕ್ಕಳು, ದುಡಿಯದ ಹೆಂಗುಸರು ಇವರೆಲ್ಲರೂ ಗೃಹಸ್ಥನನ್ನು ಅವಲಂಬಿಸಿಯೇ ಜೀವಿಸುತ್ತಾರೆ. ಆದ್ದರಿಂದ ಗೃಹಸ್ಥನು ಪಾಲಿಸತಕ್ಕ ಕೆಲವು ಕರ್ತವ್ಯಗಳು ಇರಲೇಬೇಕು; ಮತ್ತು ಈ ಕರ್ತವ್ಯಗಳನ್ನು ಅವನು ಧೈರ್ಯೋತ್ಸಾಹಗಳಿಂದಲೂ ಒಳ್ಳೇ ಹುರುಪಿನಿಂದಲೂ ಕೈಕೊಳ್ಳಬೇಕು. ಏನೋ ತನ್ನ ಯೋಗ್ಯತೆಗೂ ಮರ್ಯಾದೆಗೂ ಸಲ್ಲದಂಥ ಕೀಳು ಕೆಲಸಗಳನ್ನು ಮಾಡುತ್ತಿರುವೆನೆಂದು ಭಾವಿಸಕೂಡದು. ತಾನೊಂದು ಹುಸಿ ಕೆಲಸವನ್ನು ಅಥವಾ ತಪ್ಪನ್ನು ಮಾಡಿದ್ದರೆ ಅವನು ಅದನ್ನು ಜನರೆದುರಿಗೆ ಹಾಗೆ ಎತ್ತಿ ತೋರಿಸಬಾರದು. ತಾನು ಕೈಕೊಂಡ ಕೆಲಸದಲ್ಲಿ ಅಪಯಶಸ್ಸು ದೊರೆಯುವ ಸಂಭವವಿದ್ದರೆ ಅದನ್ನು ಆಡಿ ತೋರಿಸಬಾರದು. ತನ್ನ ಹುಳುಕನ್ನು ತಾನೇ ಬೈಲಿಗೆಳೆಯುವುದು ಅನವಶ್ಯಕವಲ್ಲದೆ ಅದರಿಂದ ತಾನೇ ಬಲಗುಂದಿ ಉತ್ಸಾಹ ಕುಗ್ಗಿ ಮಾಡತಕ್ಕ ಕರ್ತವ್ಯಗಳನ್ನು ಕೂಡ ನೆರವೇರಿಸಲಿಕ್ಕೆ ಅಸಮರ್ಥನಾಗುತ್ತಾನೆ.

ಗೃಹಸ್ಥನು ಮೊದಲು ಜ್ಞಾನವನ್ನೂ, ಆಮೇಲೆ ದ್ರವ್ಯವನ್ನೂ ಸಂಪಾದಿಸಲು ತನ್ನ ಶಕ್ತಿಮೀರಿ ಹೆಣಗಬೇಕು. ಇದು ಅವನ ಕರ್ತವ್ಯ. ತನ್ನ ಕರ್ತವ್ಯವನ್ನು ಮಾಡದವನು ಮನುಷ್ಯನೇ ಅಲ್ಲ. ದ್ರವ್ಯಸಂಪಾದನೆಗಾಗಿ ಹೋರಾಡದ ಗೃಹಸ್ಥನು ನೀತಿವಂತನಲ್ಲ. ಸೋಮಾರಿಯಾಗಿ ಆಲಸ್ಯದಲ್ಲಿ

ಕಾಲಹರಣ ಮಾಡತೊಡಗಿದರೆ ಅವನು ನೀತಿವಂತನಲ್ಲ. ಏಕೆಂದರೆ ನೂರಾರು ಜನರು ಅವನನ್ನು ಅವಲಂಬಿಸಿರುತ್ತಾರೆ. ಅವನು ಗಳಿಸಿದ ದ್ರವ್ಯದಿಂದಲೇ ನೂರಾರು ಜನರು ಪೋಷಣೆ ಹೊಂದುತ್ತಾರೆ. ಧನವಂತರಾಗಲು ಹೋರಾಡಿ ಲಕ್ಷ್ಮೀಪುತ್ರರಾದವರು ಇರದಿದ್ದರೆ ಈಗ ನಾಗರಿಕತೆಯ ಚಿನ್ಹಗಳೂ ಈ ಅನ್ನಛತ್ರಗಳೂ ಈ ಧರ್ಮಶಾಲೆಗಳೂ ಈ ಭವ್ಯ ಮಂದಿರಗಳೂ ಕಾಣಬರುತ್ತಿದ್ದವೇ?

ಧನವನ್ನು ಗಳಿಸುವುದು ದೋಷವಲ್ಲ. ಆದರೆ ಆ ಧನವನ್ನು ಸುಮ್ಮನೆ ಬಚ್ಚಿಡದೆ, ಸದ್ವಿನಿಯೋಗ ಮಾಡಿ ಹರಿದು ಹಂಚಿ ಹೋಗುವಂತೆ ಮಾಡಬೇಕು. ಗೃಹಸ್ಥನು ಜನಜೀವನಕ್ಕೂ ಸಮಾಜಕ್ಕೂ ಮೇಟಿಯಿದ್ದಂತೆ. ಧನವನ್ನು ಯೋಗ್ಯ ರೀತಿಯಿಂದ ಸಂಪಾದಿಸಿ ಯೋಗ್ಯ ರೀತಿಯಿಂದ ವಿನಿಯೋಗ ಮಾಡುವುದೇ ಈಶ್ವರನ ಪೂಜೆ. ಸತ್ಕಾರ್ಯದಲ್ಲಿ ವಿನಿಯೋಗಿಸುವುದಕ್ಕಾಗಿ ಸದುದ್ದೇಶದಿಂದ ಶುದ್ಧ ರೀತಿಯಲ್ಲಿ ಧನವನ್ನು ಸಂಪಾದಿಸಿದ ಗೃಹಸ್ಥನೂ ಗವಿಯಲ್ಲಿ ಕುಳಿತು ಈಶ್ವರ ಪ್ರಾರ್ಥನೆಯನ್ನು ಮಾಡುತ್ತಿರುವ ಸನ್ಯಾಸಿಯೂ ಒಂದೇ ಮಟ್ಟದವರು. ಇಬ್ಬರೂ ಮೋಕ್ಷಸಿದ್ಧಿಗಾಗಿ ಒಂದೇ ಸಾಧನವನ್ನು ಕೈಕೊಂಡಂತೆಯೇ ಸರಿ. ಏಕೆಂದರೆ ಇಬ್ಬರಲ್ಲಿಯೂ ಸ್ವಾರ್ಥತ್ಯಾಗ ಮತ್ತು ಆತ್ಮಸಮರ್ಪಣೆಯ ಗುಣಗಳೇ ಭಿನ್ನ ರೂಪದಲ್ಲಿ ಕಂಡುಬರುತ್ತವೆ. ಇಬ್ಬರೂ ಈಶ್ವರನಲ್ಲಿ, ಈಶ್ವರ ನಿರ್ಮಿತ ವಸ್ತುಗಳಲ್ಲಿ, ಅದೇ ಭಕ್ತಿವಿಶ್ವಾಸಗಳನ್ನು ತಾಳುತ್ತಾರೆ.

ಗೃಹಸ್ಥನು ಕೀರ್ತಿ ಸಂಪಾದನೆಗೆ ಸರ್ವ ವಿಧದಿಂದಲೂ ಯತ್ನಿಸಬೇಕು. ಜೂಜಾಡಬಾರದು; ಅನ್ಯರನ್ನು ಪೀಡಿಸಬಾರದು.

ಅನೇಕ ಜನರು ತಮ್ಮ ಕೈಮೀರಿದ ಕಾರ್ಯಗಳಿಗೆ ಕೈಹಾಕಿ ಅದರ ಸಿದ್ಧಿಗಾಗಿ ಅನ್ಯರನ್ನು ಮೋಸಗೊಳಿಸುತ್ತಾರೆ. ಇದಲ್ಲದೆ ಎಲ್ಲ ಕಾರ್ಯಗಳಲ್ಲಿಯೂ ಕಾಲಮಹಿಮೆಯೆಂಬ ಒಂದು ವಿಚಾರವುಂಟು. ಒಂದು ಕಾಲಕ್ಕೆ ಅಪಜಯವಾಗಿ ಪರಿಣಮಿಸಿದ್ದೇ ಮತ್ತೊಂದು ಕಾಲಕ್ಕೆ ಜಯವಾಗಬಹುದು.

ಗೃಹಸ್ಥನು ಸತ್ಯವೂ ಪ್ರಿಯವೂ ಹಿತವೂ ಆದ ಮಾತುಗಳನ್ನೇ ನಮ್ರವಾಗಿ ಆಡುತ್ತಿರಬೇಕು. ಅನ್ಯರ ವ್ಯಾಪಾರದಲ್ಲಿ ಬಾಯಿಹಾಕಬಾರದು. ಬಾವಿಗಳನ್ನೂ ಕೆರೆಗಳನ್ನೂ ಅಗೆಸಿ, ಮಾರ್ಗದ ಎಡಬಲಕ್ಕೆ ಗಿಡಮರಗಳನ್ನು

ನೆಟ್ಟು, ಮನುಷ್ಯರಿಗಾಗಿಯೂ ಪಶುಗಳಿಗಾಗಿಯೂ ಧರ್ಮಶಾಲೆಗಳನ್ನೂ ಆಸ್ಪತ್ರೆಗಳನ್ನೂ ವಿಶ್ರಾಂತಿಗೃಹಗಳನ್ನೂ ಕಟ್ಟಿಸಿ, ದಾರಿಗಳನ್ನು ನಿರ್ಮಾಣ ಮಾಡಿ, ಸೇತುವೆಗಳನ್ನು ಕಟ್ಟಿಸಿ ಧರ್ಮಕಾರ್ಯವನ್ನು ಮಾಡಿದ ಗೃಹಸ್ಥನು ದೊಡ್ಡ ಯೋಗಿಯು ಸಂಪಾದಿಸುವ ಗುರಿಯನ್ನೇ ಮುಟ್ಟು ತ್ತಾನೆ. ಸ್ವದೇಶ ಅಥವಾ ಸ್ವಧರ್ಮಕ್ಕಾಗಿ ಹೋರಾಡುತ್ತ ಸ್ವಕರ್ತವ್ಯಕ್ಕಾಗಿ ರಣರಂಗದಲ್ಲಿ ಮಡಿದ ಗೃಹಸ್ಥನು, ಯೋಗಿಯು ಧ್ಯಾನದಿಂದ ಸಂಪಾದಿ ಸುವ ಫಲವನ್ನೇ ಹೊಂದುತ್ತಾನೆ. ಒಬ್ಬನ ಕರ್ತವ್ಯವು ಮತ್ತೊಬ್ಬನಿಗೆ ಕರ್ತವ್ಯವಾಗಲಾರದು; ಮತ್ತು ಒಂದು ಕರ್ತವ್ಯವು ಕೀಳು, ಇನ್ನೊಂದು ಕರ್ತವ್ಯವು ಮೇಲು ಆಗಲಾರದು. ಪ್ರತಿ ಕರ್ತ್ತವ್ಯವನ್ನು ನಾವು ಮಾಡಲೇ ಬೇಕು.

ನಾವು ಗ್ರಹಿಸತಕ್ಕ ಮುಖ್ಯ ವಿಷಯವೆಂದರೆ, ಎಲ್ಲ ದೌರ್ಬಲ್ಯವನ್ನೂ ಕಿತ್ತೊಗೆಯುವುದು. ವೇದವನ್ನು ನೀವು ಓದಿದರೆ 'ಅಭಯ' 'ನಿರ್ಭಯತ್ವ' ಎಂಬ ಶಬ್ದಗಳು ಮೇಲಿಂದ ಮೇಲೆ ನಿಮಗೆ ಕಾಣಬರುವವು. ಭಯವು ದೌರ್ಬಲ್ಯದ ಲಕ್ಷಣ. ಲೋಕದ ನಿಂದಾಪಮಾನಗಳನ್ನು ಲೆಕ್ಕಿಸದೆ ಮನುಷ್ಯನು ತನ್ನ ಕರ್ತವ್ಯಗಳನ್ನು ಪರಿಪಾಲಿಸಬೇಕು.

ಸಂಸಾರದಲ್ಲಿದ್ದು ಲೋಕಕಲ್ಯಾಣಾರ್ಥವಾಗಿ ಕರ್ಮಪ್ರವೃತ್ತನಾದವನು ಈಶ್ವರಾರಾಧನೆಯನ್ನು ಮಾಡಿದಂತಾಗುವುದಿಲ್ಲವೆಂದು ಈಶ್ವರಾರಾಧನೆಯ ನಿಮಿತ್ತ ಸಂಸಾರದಿಂದ ನಿವೃತ್ತನಾದ ಮನುಷ್ಯನು ತಿಳಿಯಬಾರದು. ಅದ ರಂತೆ ಹೆಂಡಿರುಮಕ್ಕಳ ಸಲುವಾಗಿ ಪ್ರಪಂಚದಲ್ಲಿದ್ದವರು ಸನ್ಯಾಸಿಗಳನ್ನು ಕೀಳು ತರದ ಉಂಡಾಡಿಗಳೆಂದು ತಿಳಿಯಬಾರದು. ಪ್ರತಿಯೊಬ್ಬನೂ ತನ್ನಷ್ಟಕ್ಕೆ ತಾನು ದೊಡ್ಡವನೇ. ಒಂದು ಕಥೆಯನ್ನು ಕೇಳಿರಿ :

'ದೊಡ್ಡವರಾರು? ಪ್ರಪಂಚವನ್ನು ಬಿಟ್ಟು ಸನ್ಯಾಸಿಯಾದವನೋ ಪ್ರಪಂಚದಲ್ಲಿದ್ದು ತನ್ನ ಗೃಹಸ್ಥ ಧರ್ಮಗಳನ್ನೆಲ್ಲ ಯೋಗ್ಯವಾಗಿ ಪಾಲಿಸ ತಕ್ಕವನೋ?' ಎಂಬ ಪ್ರಶ್ನೆಯನ್ನು ಒಬ್ಬ ಅರಸನು ತನ್ನ ದೇಶಕ್ಕೆ ಬಂದ ಪ್ರತಿಯೊಬ್ಬ ಸನ್ಯಾಸಿಗೆ ಕೇಳುತ್ತಿದ್ದನು. ಅನೇಕ ವಿದ್ವಾಂಸರು ಇದಕ್ಕೆ ಉತ್ತರವನ್ನು ಕೊಡಲೆತ್ನಿಸಿದರು. ಸನ್ಯಾಸಿಯೇ ಹೆಚ್ಚಿನವನೆಂದು ಕೆಲವರು ಹೇಳಿದರು. ಹಾಗೆ ಸಿದ್ಧಮಾಡಿ ತೋರಿಸಲು ಅರಸನು ಅವರಿಗೆ ಹೇಳಿದನು. ಅವರಿಂದ ಅದು ಆಗದಿದ್ದರೆ ವಿವಾಹಿತರಾಗಿ ಗೃಹಸ್ಥಾಶ್ರಮಿಗಳಾಗಲು

ಅವರನ್ನು ತೊಡಗಿಸುತ್ತಿದ್ದನು. ಆ ಮೇಲೆ ಮತ್ತೆ ಕೆಲವರು ಬಂದು 'ತನ್ನ ಕರ್ತವ್ಯಗಳಲ್ಲಿ ನಿರತನಾದ ಗೃಹಸ್ಥನೇ ಮೇಲಾದವನು' ಎಂದು ಹೇಳಿದರು. ಅದನ್ನು ಸಿದ್ಧಮಾಡಿ ತೋರಿಸಲು ಅರಸನು ಅವರಿಗೆ ಹೇಳಿದನು. ಅವರಿಂದ ಅದು ಆಗದಿದ್ದರೆ ಅವರಿಗೂ ಗೃಹಸ್ಥಾಶ್ರಮಿಗಳಾಗಲು ಆಜ್ಞಾಪಿಸುತ್ತಿದ್ದನು. ಕೊನೆಗೆ ಒಬ್ಬ ತರುಣ ಸನ್ಯಾಸಿಯು ಬಂದನು. ಅವನನ್ನೂ ಅರಸನು ಆದರಂತೆ ಕೇಳಿದನು. ಅವನು 'ಅರಸನೇ, ಪ್ರತಿಯೊಬ್ಬನೂ ತನ್ನ ತನ್ನ ಸ್ಥಳದಲ್ಲಿ ತಾನು ದೊಡ್ಡವನೇ' ಎಂದು ಉತ್ತರ ಕೊಟ್ಟನು. ಅದನ್ನು ಸಿದ್ಧಮಾಡಿ ತೋರಿಸೆಂದು ಅರಸನು ಕೇಳಲಾಗಿ ಆ ಸನ್ಯಾಸಿಯು 'ಒಳ್ಳೇದು, ಆದರೆ ನೀನು ಕೆಲವು ದಿನ ಬಂದು ನನ್ನೊಡನೆ ನಾನಿದ್ದಂತೆ ಇರಬೇಕು' ಎಂದು ಹೇಳಿದನು. ಅರಸನು ಒಪ್ಪಿಕೊಂಡು, ತನ್ನ ಸೀಮೆಯನ್ನು ದಾಟಿ ಅವನ ಕೂಡ ಪರರಾಜ್ಯಗಳಲ್ಲಿ ಎಷ್ಟೋ ದಿವಸ ಪ್ರಯಾಣ ಮಾಡಿ ಕೊನೆಗೆ ಒಂದು ರಾಜ್ಯಕ್ಕೆ ಬಂದನು. ಆ ರಾಜ್ಯದ ರಾಜಧಾನಿಯಲ್ಲಿ ಒಂದು ದೊಡ್ಡ ಉತ್ಸವವು ನಡೆದಿತ್ತು. ಅರಸನೂ ಸನ್ಯಾಸಿಯೂ ವಾದ್ಯಗಳು ನಗಾರಿ ನೌಬತ್ತುಗಳು ಬಾರಿಸುವುದನ್ನೂ ಡಂಗುರ ಹೊಡೆಯುವುದನ್ನೂ ಕೇಳಿದರು. ಉತ್ತಮೋತ್ತಮವಾದ ಹೊಸ ಉಡುಪುಗಳನ್ನು ಧರಿಸಿದ ಪಟ್ಟಣಿಗರು ಬೀದಿಗಳಲ್ಲಿ ನೆರೆದಿದ್ದರು. ಅಲ್ಲಿ ಒಂದು ಮಹತ್ವದ ಡಂಗುರವನ್ನು ಸಾರುತ್ತಿದ್ದರು. ಆಗ ಏನು ನಡೆಯುವುದೆಂಬುದನ್ನು ನೋಡುವುದಕ್ಕಾಗಿ ಅರಸನೂ ಸನ್ಯಾಸಿಯೂ ನಿಂತುಕೊಂಡರು. ಆ ದೇಶದ ರಾಜನ ಮಗಳು ನೆರೆದ ಸಭಿಕರೊಳಗಿಂದ ತನ್ನ ಪತಿಯನ್ನು ಆರಿಸಿಕೊಳ್ಳುವವಳಿರುವಳೆಂದು ಸ್ವಯಂವರದ ಡಂಗುರವನ್ನು ಸಾರುತ್ತ ಒಬ್ಬ ಮನುಷ್ಯನು ಬಂದನು.

ಹಿಂದಕ್ಕೆ ಹಿಂದುಸ್ಥಾನದಲ್ಲಿ ರಾಜಪುತ್ರಿಯರು ತಮಗೆ ಅನುರೂಪನಾದಂಥ ಪತಿಯನ್ನು ತಾವೇ ಆರಿಸಿಕೊಳ್ಳುವ ಒಂದು ಪದ್ಧತಿ ಇತ್ತು. ಅದಕ್ಕೆ ಸ್ವಯಂವರವೆನ್ನುತ್ತಿದ್ದರು. ಪ್ರತಿಯೊಬ್ಬ ರಾಜಪುತ್ರಿಯೂ ತನ್ನ ಪತಿಯು ಹೇಗಿರಬೇಕೆಂಬ ಬಗೆಗೆ ತನ್ನ ವಿಚಾರಗಳನ್ನು ಗೊತ್ತುಪಡಿಸಿಕೊಂಡು ಇರುತ್ತಿದ್ದಳು. ಕೆಲವರಿಗೆ ಅತಿಶಯ ಸುಂದರನಾದ ಪತಿಯು ಬೇಕು; ಮತ್ತೆ ಕೆಲವರಿಗೆ ವಿದ್ವಾಂಸನಾದ ಪತಿಯು ಬೇಕು; ಹಲವರಿಗೆ ಅತಿಶಯ ಶ್ರೀಮಂತ ಪತಿಯು ಬೇಕು. ನೆರೆಹೊರೆಯ ರಾಜಪುತ್ರರೆಲ್ಲರೂ

ಉತ್ತಮೋತ್ತಮ ಉಡುಪುಗಳನ್ನು ಹಾಕಿಕೊಂಡು ಅಲಂಕೃತರಾಗಿ ಸಭಾ ಮಂಟಪದಲ್ಲಿ ಆಕೆಯ ಎದುರಿಗೆ ಬರುತ್ತಿದ್ದರು. ಅನೇಕ ಸಲ ಈ ರಾಜ ಪುತ್ರರು ಕೂಡ ತಮ್ಮ ಭಟ್ಟಂಗಿಗಳಿಂದ ತಮ್ಮ ಬಿರುದಾವಳಿಗಳನ್ನೂ ಗುಣಾತಿಶಯಗಳನ್ನೂ ರಾಜಪುತ್ರಿಯು ತಮ್ಮನ್ನೇ ಏಕೆ ಆರಿಸಬೇಕೆಂಬ ಕಾರಣಗಳನ್ನೂ ಹೊಗಳಿಸಿಕೊಳ್ಳುತ್ತಿದ್ದರು. ರಾಜಪುತ್ರಿಯು ಒಂದು ಸಿಂಹಾಸನದ ಮೇಲೆ ಸುಂದರ ವಸ್ತ್ರಾಲಂಕಾರಗಳಿಂದ ಭೂಷಿತಳಾಗಿ ಕುಳಿತು ಸುತ್ತಲೂ ತಿರುಗಾಡಿ ಪರೀಕ್ಷಿಸಿ ನೋಡಿ ವಿಚಾರಿಸಿಕೊಳ್ಳುತ್ತಿದ್ದಳು. ಒಬ್ಬೊಬ್ಬರನ್ನು ನೋಡಿ ಆತನ ವಿಷಯ ಕೇಳಿಕೊಂಡು, ಸಂತುಷ್ಟಳಾಗ ದಿದ್ದರೆ ಮುಂದಕ್ಕೆ ಸಾಗುತ್ತಿದ್ದಳು. ಆ ಬೇಡವಾದ ವರಗಳನ್ನು ಮುಂದೆ ಯಾರೂ ಲಕ್ಷಿಸುತ್ತಿದ್ದಿಲ್ಲ. ಯಾರ ಮೇಲಾದರೂ ಆಕೆಯ ಪ್ರೀತಿ ಯುಂಟಾಗಿ ಆಕೆಯ ಮನಸ್ಸಿಗೆ ಬಂದರೆ ಅವನ ಕೊರಳಲ್ಲಿ ಮಾಲೆಯನ್ನು ಹಾಕುತ್ತಿದ್ದಳು. ಅವನೇ ಆಕೆಯ ಪತಿ.

ನಮ್ಮ ರಾಜನು ಮತ್ತು ಸನ್ಯಾಸಿಯು ಪ್ರವೇಶಿಸಿದ ದೇಶದ ರಾಜಪುತ್ರಿ ಇಂಥದೊಂದು ಸ್ವಯಂವರ ಕಾರ್ಯದಲ್ಲಿ ತೊಡಗಿದ್ದಳು. ಆಕೆ ಅತಿಶಯ ರೂಪವತಿಯಾದ ರಾಜಪುತ್ರಿ. ಆಕೆಯ ಪಾಣಿಗ್ರಹಣ ಮಾಡಿದವನು ಮುಂದೆ ಆಕೆಯ ತಂದೆಯ ಮರಣದ ನಂತರ ಆ ರಾಜ್ಯಕ್ಕೆ ಅರಸಾಗತಕ್ಕ ವನು. ಅತಿಶಯ ಸುಂದರನಾದ ಪುರುಷನನ್ನು ಮದುವೆಯಾಗಬೇಕೆಂದು ಆ ರಾಜಪುತ್ರಿಯ ಅಭಿಲಾಷೆ. ಆದರೆ ತನ್ನ ಮನಸ್ಸಿಗೆ ಸಮಾಧಾನ ವಾಗುವಂಥ ಯೋಗ್ಯ ವರನೇ ಸಿಗಲಿಲ್ಲ. ಹಲವು ಸಲ ಇಂಥ ಸ್ವಯಂವರ ಗಳನ್ನು ನಡೆಸಿದ್ದರೂ ಯೋಗ್ಯ ಪತಿ ದೊರಕಿದ್ದಿಲ್ಲ. ಹಿಂದಿನ ಸ್ವಯಂವರ ಗಳಿಗಿಂತ ಇದು ಹೆಚ್ಚು ವೈಭವವುಳ್ಳದ್ದು. ಎಂದಿಗಿಂತಲೂ ಈ ಸಲ ಬಹು ಜನರು ನೆರೆದಿದ್ದರು. ರಾಜಪುತ್ರಿಯು ಸಿಂಹಾಸನದ ಮೇಲೆ ಕುಳಿತು ಬಂದಳು. ವಾಹಕರು ಆಕೆಯನ್ನು ಸ್ಥಳದಿಂದ ಸ್ಥಳಕ್ಕೆ ಒಯ್ಯುತ್ತಿದ್ದರು. ಯಾರೂ ಆಕೆಯ ಮನಸ್ಸಿಗೆ ಒಪ್ಪುವಂತೆ ತೋರಲಿಲ್ಲ. ಈ ಸಲದ ಸ್ವಯಂವರವೂ ನಿಷ್ಪ್ರಯೋಜನವಾಗುವುದೆಂದು ಎಲ್ಲರೂ ನಿರಾಶೆಹೊಂದಿ ದರು. ಅಷ್ಟರಲ್ಲಿ ಒಬ್ಬ ಸನ್ಯಾಸಿಯು ಪ್ರವೇಶಿಸಿದ್ದನು. ಅವನು ಭೂಮಿ ಗಿಳಿದು ಬಂದ ಪ್ರತಿಸೂರ್ಯನಂತೆ ತೇಜಸ್ವಿಯೂ ಸುಂದರನೂ ಆಗಿದ್ದನು; ನಡೆದುದನ್ನೆಲ್ಲ ನೋಡುತ್ತ ಸಭಾಮಂಟಪದ ಒಂದು ಮೂಲೆಯಲ್ಲಿ ನಿಂತು

ಕೊಂಡಿದ್ದನು. ಕ್ರಮೇಣ ರಾಜಪುತ್ರಿ ಅವನ ಸಮೀಪಕ್ಕೆ ಬಂದು ಅವನನ್ನು ನೋಡಿದ ಕೂಡಲೇ ಅಲ್ಲಿಯೇ ತಟಸ್ಥಳಾಗಿ ನಿಂತು ಅವನ ಕೊರಳಲ್ಲಿ ಮಾಲೆ ಹಾಕಿಬಿಟ್ಟಳು. ಆ ತರುಣ ಸನ್ಯಾಸಿ ಆ ಮಾಲೆಯನ್ನು ಹಿಡಿದೆಳೆದು ದೂರಕ್ಕೆ ಬಿಸುಟು 'ಇದೆಂಥ ಮೂರ್ಖತನ! ನಾನು ಸನ್ಯಾಸಿ! ಮದುವೆಯ ಗೊಡವೆ ನನಗೇತಕ್ಕೆ?' ಎಂದು ಕೂಗಿದನು. ಬಡವನಿದ್ದದರಿಂದ ಈ ರಾಜಪುತ್ರಿಯು ಪಾಣಿಗ್ರಹಣ ಮಾಡಲಿಕ್ಕೆ ಆ ಸನ್ಯಾಸಿ ಒಪ್ಪಲೊಲ್ಲನೆಂದು ತಿಳಿದು ಆ ದೇಶದ ರಾಜನು "ನನ್ನ ಮಗಳನ್ನು ವರಿಸಿದವರಿಗೆ ಈಗ ಅರ್ಧ ರಾಜ್ಯವೂ ನನ್ನ ಮರಣದ ನಂತರ ಇಡೀ ರಾಜ್ಯವೂ ಪ್ರಾಪ್ತವಾಗುವುದು" ಎಂದು ಹೇಳಿ ಆ ಮಾಲೆಯನ್ನು ಪುನಃ ಅವನ ಕೊರಳಲ್ಲಿ ಹಾಕಿದನು. ಆ ತರುಣನು ಮತ್ತೆ ಆ ಮಾಲೆಯನ್ನು ಕಿತ್ತೊಗೆದು, 'ಏನಿದು ಹುಚ್ಚಾಟ! ನನಗೆ ಮದುವೆ ಬೇಕಿಲ್ಲ' ಎಂದು ತಟ್ಟನೆ ನುಡಿದು ಸಭೆಯಿಂದ ಹೊರಬಿದ್ದು ಹೊರಟು ಹೋದನು.

ಆ ರಾಜಪುತ್ರಿಯ ಮನಸ್ಸು ಮಾತ್ರ ಈ ತರುಣನಲ್ಲಿ ಬಹಳ ನೆಟ್ಟಿತ್ತು. 'ಈ ಮನುಷ್ಯನನ್ನೇ ನಾನು ಮದುವೆಯಾಗುವೆನು. ಇಲ್ಲವೆ ಸಾಯುವೆನು' ಎಂದು ಹೇಳಿ ಆ ತರುಣಿಯು ಸನ್ಯಾಸಿಯನ್ನು ಕರೆತರುವುದಕ್ಕಾಗಿ ಅವನನ್ನು ಹಿಂಬಾಲಿಸಿ ಹೋದಳು. ಪ್ರೇಕ್ಷಕರಾದ ನಮ್ಮ ರಾಜನೂ ಸನ್ಯಾಸಿಯೂ ಅವರ ಹಿಂದೆ ಸ್ವಲ್ಪ ಅಂತರದಲ್ಲಿ ಅವರನ್ನು ಹಿಂಬಾಲಿಸಿದರು. ರಾಜಪುತ್ರಿಯನ್ನು ವರಿಸಲೊಲ್ಲದ ಸನ್ಯಾಸಿ ಪಟ್ಟಣವನ್ನು ಬಿಟ್ಟು ಹಳ್ಳಿಗಾಡುಗಳಲ್ಲಿ ಅನೇಕ ಮೈಲಿಗಳ ವರೆಗೆ ನಡೆದು ಕೊನೆಗೆ ಒಂದು ಅಡವಿಯನ್ನು ಪ್ರವೇಶಿಸಿದನು. ರಾಜಪುತ್ರಿಯೂ ಹಿಂಬಾಲಿಸಿದಳು. ನಮ್ಮ ಪ್ರೇಕ್ಷಕರಾದ ರಾಜನೂ ಸನ್ಯಾಸಿಯೂ ಹಿಂದಿನಿಂದ ನಡೆದಿದ್ದರು. ಆ ಅಡವಿಯು ಆ ತರುಣ ಸನ್ಯಾಸಿಗೆ ಪರಿಚಿತ ಸ್ಥಳವಾಗಿದ್ದುದರಿಂದ ಅದರ ಸಂದುಮೂಲೆಗಳೆಲ್ಲ ಅವನಿಗೆ ಗೊತ್ತಿದ್ದವು. ಒಮ್ಮೆಲೆ ಅವನು ಒಂದು ಸಂದಿನಲ್ಲಿ ಹೊಕ್ಕು ಕಾಣದಂತಾದನು. ಅವನನ್ನು ಹುಡುಕಿ ತೆಗೆಯುವುದು ರಾಜಪುತ್ರಿಗೆ ಆಗಲಿಲ್ಲ. ಬಹು ಹೊತ್ತಿನ ವರೆಗೆ ಅವನ ಶೋಧ ಮಾಡಿ ಮಾಡಿ ದಣಿದು ಬೇಸತ್ತು, ಒಂದು ಮರದ ಕೆಳಗೆ ಕುಳಿತು ಅಳತೊಡಗಿದಳು. ಆಕೆಗೆ ಹೊರಗೆ ಹೋಗಲಿಕ್ಕೂ ಮಾರ್ಗವು ಗೊತ್ತಿದ್ದಿಲ್ಲ. ಆಗ ನಮ್ಮ ಪ್ರೇಕ್ಷಕರಾದ ರಾಜನೂ ಸನ್ಯಾಸಿಯೂ ಆಕೆಯ ಬಳಿಗೆ ಬಂದು

'ತಂಗೀ, ಅಳಬೇಡ; ಈ ಅಡವಿಯೊಳಗಿಂದ ಹೊರಗೆ ಹೋಗಲಿಕ್ಕೆ ನಿನಗೆ ನಾವು ಹಾದಿ ತೋರಿಸುತ್ತೇವೆ. ಆದರೆ ಈಗ ಬಹಳ ಕತ್ತಲಾಗಿದೆ; ಹಾದಿಯು ಕಾಣುವಂತಿಲ್ಲ. ಇಲ್ಲಿಯೇ ಒಂದು ದೊಡ್ಡ ಮರವಿದೆ. ಅದರ ಕೆಳಗೆ ಈ ರಾತ್ರಿ ವಿಶ್ರಮಿಸಿಕೊಂಡು ಮುಂಜಾನೆ ಅರುಣೋದಯದಲ್ಲಿದ್ದು ನಿನಗೆ ಮಾರ್ಗವನ್ನು ತೋರಿಸುವೆವು' ಎಂದು ಹೇಳಿದರು.

ಅದೇ ಮರದಲ್ಲಿ ಒಂದು ಗೂಡು ಕಟ್ಟಿಕೊಂಡು ಒಂದು ಸಣ್ಣ ಪಕ್ಷಿಯೂ ಅದರ ಹೆಂಡತಿಯೂ ಅವುಗಳ ಮೂರು ಮರಿಗಳೂ ವಾಸಿಸುತ್ತಿದ್ದವು. ಆ ಸಣ್ಣ ಪಕ್ಷಿಯು ಕೆಳಗೆ ಮೂವರು ಕುಳಿತದ್ದನ್ನು ನೋಡಿ, "ಪ್ರಿಯೆ, ಏನು ಮಾಡೋಣ! ನಮ್ಮ ಮನೆಗೆ ಇಲ್ಲಿ ಅತಿಥಿಗಳು ಬಂದಿರುವರು. ಈಗ ಚಳಿಗಾಲ. ಬೆಂಕಿಯನ್ನು ಹೊತ್ತಿಸಿಲ್ಲವಲ್ಲ!" ಎಂದು ತನ್ನ ಹೆಂಡತಿಗೆ ಹೇಳುತ್ತ ಭರ್ರನೆ ಹೊರಗೆ ಹಾರಿ ಹೋಗಿ ತನ್ನ ಕೊಕ್ಕಿನಿಂದ ಒಂದು ಉರಿಯುವ ಕಟ್ಟಿಗೆ ತುಂಡನ್ನು ತಂದು ಆ ಅತಿಥಿಗಳೆದುರಿಗೆ ಚಲ್ಲಿತು. ಅವರು ಅದರ ಮೇಲೆ ಕಟ್ಟಿಗೆಗಳನ್ನು ಮುರಿದು ಹಾಕಿ, ಅಗ್ನಿಯನ್ನು ಹೊತ್ತಿಸಿದರು. ಇಷ್ಟರಿಂದಲೇ ಆ ಪುಟ್ಟ ಪಕ್ಷಿಗೆ ಸಮಾಧಾನವಾಗಲಿಲ್ಲ. ಅದು ಪುನಃ ತನ್ನ ಹೆಂಡತಿಗೆ "ಏನು ಮಾಡೋಣ? ಈ ಅತಿಥಿಗಳು ಹಸಿದಿದ್ದಾರೆ. ಅವರಿಗೆ ತಿನ್ನಲಿಕ್ಕೆ ಕೊಡಲು ನಮ್ಮಲ್ಲಿ ಆಹಾರವೇನೂ ಇಲ್ಲ. ನಾವು ಗೃಹಸ್ಥಾಶ್ರಮಿಗಳು; ಮನೆಗೆ ಬಂದ ಅತಿಥಿಗಳನ್ನು ಉಣ್ಣಿಸುವುದು ನಮ್ಮ ಕರ್ತವ್ಯ. ನಮಗೆ ಶಕ್ಯವಿದ್ದಷ್ಟು ನಾವು ಮಾಡಲೇಬೇಕು. ನನ್ನ ದೇಹವನ್ನೇ ಅವರಿಗೆ ಕೊಟ್ಟು ಬಿಡುವೆನು" ಎಂದು ಹೇಳಿ ಆ ಅಗ್ನಿಯ ಮಧ್ಯದಲ್ಲಿ ಹಾರಿಕೊಂಡು ಪ್ರಾಣ ಬಿಟ್ಟಿತು. ಅದು ಕೆಳಗೆ ಬೀಳುವುದನ್ನು ಅತಿಥಿಗಳು ನೋಡಿದರು. ಆದರೆ ಅವರು ಇದನ್ನು ನಿರೋಧಿಸಿ ಸಂರಕ್ಷಿಸಲು ಯತ್ನಿಸುವಷ್ಟರಲ್ಲಿ ಆ ಹಕ್ಕಿಯು ಆತ್ಮಾಹುತಿಯನ್ನು ಕೊಟ್ಟಿತು.

ತನ್ನ ಪತಿಯ ಆಚರಣೆಯನ್ನು ನೋಡಿ ಹೆಣ್ಣು ಹಕ್ಕಿಯೂ "ಮೂವರೂ ಅತಿಥಿಗಳಿಗೆ ಒಂದು ಸಣ್ಣ ಹಕ್ಕಿ ಸಾಲಲಾರದು. ಅಷ್ಟರಿಂದ ಅವರ ಹಸಿವೆ ಅಡಗುವುದಿಲ್ಲ. ಪತಿಯ ಉದ್ದೇಶವು ವ್ಯರ್ಥವಾಗದಂತೆ ಆಚರಿಸುವುದು ಪತ್ನಿಯ ಕರ್ತವ್ಯ. ನನ್ನ ದೇಹವನ್ನೂ ಅವರಿಗೆ ಅರ್ಪಿಸುವೆನು" ಎಂದು ಆಲೋಚಿಸಿ ಅಗ್ನಿಯಲ್ಲಿ ಹಾರಿಕೊಂಡು ಮರಣಹೊಂದಿತು.

ಪ್ರತಿಯೊಬ್ಬ ಮನುಷ್ಯನು ತನ್ನಷ್ಟಕ್ಕೆ ತಾನು ದೊಡ್ಡವನೇ!

ಆ ಮೇಲೆ ಆ ಮೂರು ಸಣ್ಣ ಮರಿಗಳೂ ತಮ್ಮ ತಾಯಿತಂದೆಗಳ ಆತ್ಮ ಸಮರ್ಪಣೆಯನ್ನು ಕಂಡು, ಆ ಮೂವರು ಅತಿಥಿಗಳಿಗೆ ಇಷ್ಟರಿಂದಲೂ ತಕ್ಕಷ್ಟು ಆಹಾರವು ಒದಗಲಿಲ್ಲವೆಂದು ತಿಳಿದು "ನಮ್ಮ ತಾಯಿತಂದೆಗಳು ತಮ್ಮ ಶಕ್ತಿಯಿದ್ದಷ್ಟು ಮಾಡಿದರು; ಆದರೂ ಅದು ತಕ್ಕಷ್ಟು ಆಗಲಿಲ್ಲ. ಅವರ ಕಾರ್ಯವನ್ನು ಪೂರ್ಣಗೊಳಿಸುವುದು ನಮ್ಮ ಕರ್ತವ್ಯ. ಆದ್ದರಿಂದ ನಮ್ಮ ದೇಹಗಳೂ ಹೋಗಲಿ" ಎಂದು ನಿರ್ಣಯಿಸಿ ಅವೂ ಅಗ್ನಿಯಲ್ಲಿ ಆತ್ಮಾಹುತಿಯನ್ನು ಮಾಡಿಕೊಂಡವು.

ಇದನ್ನೆಲ್ಲ ನೋಡಿ ಚಕಿತರಾಗಿ ಕುಳಿತಿದ್ದ ಆ ಮೂವರು ಅತಿಥಿಗಳು ಆ ಪಕ್ಷಿಗಳನ್ನು ತಿನ್ನುವುದಂತೂ ದೂರದ ಮಾತು. ಇಡೀ ರಾತ್ರಿಯೆಲ್ಲ ಆಹಾರವಿಲ್ಲದೆ ಕಳೆದು ರಾಜನೂ ಸನ್ಯಾಸಿಯೂ ಬೆಳಿಗ್ಗೆ ಎದ್ದು ಆ ರಾಜ ಪುತ್ರಿಗೆ ದಾರಿ ತೋರಿಸಿದರು. ಆಕೆ ತನ್ನ ತಂದೆಯ ಕಡೆಗೆ ಪುನಃ ಹೋದಳು.

ಆ ಮೇಲೆ ಆ ಸನ್ಯಾಸಿ ಆ ರಾಜನನ್ನು ಕುರಿತು ಹೀಗೆ ಹೇಳಿದನು:- "ರಾಜನೇ, ಪ್ರತಿಯೊಬ್ಬನೂ ತನ್ನ ಯೋಗ್ಯ ಸ್ಥಳದಲ್ಲಿ ತಾನು ದೊಡ್ಡವನೇ! ಪ್ರಾಪಂಚಿಕನಾಗಿರುವುದಾದರೆ, ಆ ಪಕ್ಷಿಗಳಂತೆ ಪರರಿಗಾಗಿ ಯಜ್ಞಕುಂಡ ದಲ್ಲಿ ಹಾರಿಕೊಂಡು ಆತ್ಮಾಹುತಿಯನ್ನು ಕೊಡಲಿಕ್ಕೆ ಸಿದ್ಧನಾಗಿರಬೇಕು. ಸನ್ಯಾಸಿಯಾಗಬೇಕಾಗಿದ್ದರೆ, ಅತಿಶಯ ಸುಂದರ ತರುಣಿಯನ್ನೂ ರಾಜ್ಯ ವನ್ನೂ ಕಡೆಗಣ್ಣಿನಿಂದ ಕೂಡ ನೋಡದ ಆ ತರುಣ ಸನ್ಯಾಸಿಯಂತಿರಬೇಕು. ಗೃಹಸ್ಥನಾಗಿರಬೇಕಾಗಿದ್ದರೆ, ಲೋಕಕಲ್ಯಾಣಕ್ಕಾಗಿ ತನ್ನ ಆಯುಷ್ಯವನ್ನು ಧಾರೆಯೆರೆಯಬೇಕು. ಸನ್ಯಾಸಿಯಾಗಿರಬೇಕಾಗಿದ್ದರೆ ರೂಪ, ಸೌಂದರ್ಯ, ಸಂಪತ್ತು, ಅಧಿಕಾರ ಇವುಗಳನ್ನು ಸರ್ವಥಾ ತ್ಯಜಿಸು. ಯಾವ ಕರ್ತವ್ಯ ದಲ್ಲಿಯೂ ಮೇಲು-ಕೀಳೆಂಬ ಭಾವನೆ ಇರಕೂಡದು. ಪ್ರತಿಯೊಬ್ಬನೂ ತನ್ನಷ್ಟಕ್ಕೆ ತಾನು ದೊಡ್ಡವನೇ. ಆದರೆ ಒಬ್ಬನ ಕರ್ತವ್ಯವೇ ಮತ್ತೊಬ್ಬನ ಕರ್ತವ್ಯವಾಗಬೇಕೆಂಬ ನಿಯಮವಿಲ್ಲ."

# ಕರ್ಮದ ಗುಟ್ಟು

ಪರರ ಶಾರೀರಕ ಕೊರತೆಗಳನ್ನು ದೂರ ಮಾಡುವುದರಲ್ಲಿ ನಮ್ಮ ೀಹವನ್ನು ಸವೆಸುವುದು ದೊಡ್ಡ ಕೆಲಸವೇನೋ ನಿಜ. ಪರರ ಕೊರ ಯು ಹೆಚ್ಚು ಇದ್ದ ಹಾಗೆಲ್ಲ ಮತ್ತು ನಾವು ಮಾಡಿದ ಸಹಾಯವು ಬಹು ಎಲ ಫಲದಾಯಿಯಾದ ಹಾಗೆಲ್ಲ ನಮ್ಮ ಸೇವೆಯ ಬೆಲೆ ಹೆಚ್ಚು. ಒಬ್ಬ ುನುಷ್ಯನ ಕೊರತೆಗಳನ್ನು ಒಂದು ಗಂಟೆಯವರೆಗೆ ನಿವಾರಣೆ ಮಾಡಿದರೆ ದು ಸಹಾಯವಾಯಿತೇನೊ ನಿಜ. ಒಂದು ವರ್ಷದ ವರೆಗೆ ಅವನ ೊರತೆಗಳು ದೂರವಾದರೆ ಆದಕ್ಕೂ ಹೆಚ್ಚು ಸಹಾಯ ಮಾಡಿದಂತಾ ಯಿತು. ಅವನ ಕೊರತೆಗಳು ಕೊನೆತನಕ ದೂರವಾದರೆ, ನಿಜವಾಗಿ ಎಲ್ಲಕ್ಕೂ ಹೆಚ್ಚಿನ ಸಹಾಯ ಮಾಡಿದಂತೆ. ಅಧ್ಯಾತ್ಮಿಕ ಜ್ಞಾನವೊಂದೇ ನಮ್ಮ ದುಃಖಗಳನ್ನೆಲ್ಲ ಕಡೆತನಕ ನಿವಾರಣೆ ಮಾಡಬಲ್ಲದು. ಉಳಿದ ಜ್ಞಾನವು ನಮ್ಮ ಕೊರತೆಗಳನ್ನು ಕೆಲವು ಕಾಲದ ವರೆಗೆ ಮಾತ್ರ ದೂರ ಮಾಡಬಲ್ಲದು. ಆತ್ಮಜ್ಞಾನದಿಂದಲೇ ಮನುಷ್ಯನ ವಾಸನೆಗಳೆಲ್ಲ ಲಯ ಹೊಂದುವವು. ಆದ್ದರಿಂದ ಆತ್ಮಜ್ಞಾನವನ್ನು ಕೊಡುವುದೇ ಎಲ್ಲಕ್ಕೂ ಹೆಚ್ಚಿನ ಸಹಾಯ. ಆತ್ಮಜ್ಞಾನವನ್ನು ದಾನಮಾಡುವವನೇ ಜಗತ್ತಿನ ಶ್ರೇಷ್ಠ ಕಲ್ಯಾಣಕರ್ತ. ಅವನೇ ಅದ್ಭುತ ಸಾಮರ್ಥ್ಯವುಳ್ಳವನು. ಏಕೆಂದರೆ, ನಮ್ಮ ಜೀವನಕ್ಕೆಲ್ಲ ಅಧ್ಯಾತ್ಮವೇ ತಳಹದಿ.

ಅಧ್ಯಾತ್ಮ ವಿಷಯದಲ್ಲಿ ಗಟ್ಟಿಗನೂ ದೀರ್ಘಾನುಭವಿಯೂ ಆದವನು ಇಷ್ಟಪಟ್ಟರೆ ಉಳಿದ ಯಾವ ವಿಷಯದಲ್ಲಿಯೂ ಮೇಲುಗೈಯನ್ನು ಪಡೆಯ ಬಹುದು. ಅಧ್ಯಾತ್ಮಿಕ ಬಲವು ಲಭಿಸುವ ವರೆಗೆ ಶಾರೀರಕ ಕೊರತೆಗಳು ಕೂಡ ಪೂರ್ಣತೆಯನ್ನು ಹೊಂದಲಾರವು. ಅಧ್ಯಾತ್ಮ ಜ್ಞಾನದಾನದ ತರುವಾಯ ಬೌದ್ಧಿಕ ಜ್ಞಾನದಾನವೆ ಮಿಗಿಲಾದದ್ದು. ಅದು ಅನ್ನವಸ್ತ್ರಗಳ ದಾನಕ್ಕಿಂತಲೂ ಎಷ್ಟೋ ಮಡಿ ಮಿಗಿಲು, ಜೀವದಾನಕ್ಕಿಂತ ಹೆಚ್ಚಿನದು. ಏಕೆಂದರೆ ಜ್ಞಾನವೇ ಮನುಷ್ಯನ ನಿಜವಾದ ಜೀವನ; ಅಜ್ಞಾನವೇ ಮರಣ. ಅಜ್ಞಾನಾಂಧಃಕಾರದಲ್ಲಿ ದಾರಿತಪ್ಪಿ ಎಡವಿ ಮುಗ್ಗರಿಸಿ ದುಃಖ

ಪಡುವ ಜೀವನವು ಜೀವನವೇ ಅಲ್ಲ. ಜ್ಞಾನದಾನದ ತರುವಾಯ ವಿಷಯವಸ್ತುಗಳ ದಾನಕ್ಕೆ ಮಹತ್ವವುಂಟು. ಆದ್ದರಿಂದ ಪರೋಪಕಾರದ ವಿಷಯವನ್ನು ವಿಮರ್ಶಿಸುವಾಗ ವಿಷಯವಸ್ತುದಾನವೇ ಒಂದು ಮಹತ್ವದ ಉಪಕಾರವೆಂಬ ತಪ್ಪು ತಿಳಿವಳಿಕೆಯನ್ನು ಮಾಡಿಕೊಳ್ಳ ದಂತೆ ನಾವು ಯಾವಾಗಲೂ ಎಚ್ಚರಿಕೆಯಿಂದ ಇರಬೇಕು. ವಿಷಯ ವಸ್ತುದಾನದಿಂದ ಒದಗುವ ತೃಪ್ತಿಸಮಾಧಾನಗಳು ತಾತ್ಪೂರ್ತಿಕವಿರುವುದ ರಿಂದ ಅದು ಕಡಿಮೆ ತರದ ದಾನ. ಹಸಿವೆಯ ದುಃಖವು ಊಟದಿಂದ ಶಾಂತವಾಗುವುದು. ಆದರೆ ಮತ್ತೆ ಹಸಿವಾಗುವುದು. ಎಂದೂ ಕೊರತೆ ಉಂಟಾಗದಂತೆ ಸಂಪೂರ್ಣ ತೃಪ್ತಿಯಾದ ಮೇಲೆ ನನ್ನ ದುಃಖವು ನಾಶ ವಾಗುವುದು. ಆ ಮೇಲೆ ಹಸಿವಿನಿಂದ ನನಗೆ ದುಃಖವಾಗುವುದಿಲ್ಲ. ಯಾವ ದುಃಖವೂ ನೋವೂ ನನ್ನನ್ನು ಗಾಬರಿಗೊಳಿಸುವುದಿಲ್ಲ. ಆದ್ದರಿಂದ ಆಧ್ಯಾ ತ್ಮಿಕಬಲ ದಾನವೇ ಮಿಗಿಲಾದ ಪರೋಪಕಾರವು. ಬೌದ್ಧಿಕಜ್ಞಾನದಾನದ ಮಹತ್ವ ಆ ಮೇಲೆ.

ವಿಷಯವಸ್ತುಗಳ ಪೂರೈಕೆಯಿಂದ ಸಂಸಾರದೊಳಗಿನ ದುಃಖವೆಂದೂ ಮಾಯವಾಗುವುದಿಲ್ಲ. ಮನುಷ್ಯನ ಸ್ವಭಾವವು ಪರಿವರ್ತನೆ ಹೊಂದುವ ವರೆಗೆ ಈ ವಿಷಯಗಳ ಕೊರತೆ ಪುನಃ ಪುನಃ ಉಂಟಾಗುವುದು. ದುಃಖವು ಎಂದಿಗೂ ತಪ್ಪುವುದಿಲ್ಲ. ಬಹಿರಂಗ ಸುಧಾರಣೆಯನ್ನೆಷ್ಟು ಮಾಡಿದರೂ ತೃಪ್ತಿಯಾಗುವುದಿಲ್ಲ. ಈ ತೊಡಕಿನಿಂದ ಪಾರಾಗಲು ಮನಸ್ಸನ್ನು ಶುದ್ಧ ಗೊಳಿಸುವುದೊಂದೇ ಉಪಾಯ. ಅಜ್ಞಾನವೇ ಸಂಸಾರದೊಳಗಿನ ಎಲ್ಲ ದುಃಖಗಳಿಗೂ ಅನರ್ಥಪರಂಪರೆಗಳಿಗೂ ಕಾರಣ. ಮನುಷ್ಯರು ಜ್ಞಾನ ವನ್ನು ಸಂಪಾದಿಸಿ ಶುದ್ಧಾಂತಃಕರಣವುಳ್ಳವರೂ ಆಧ್ಯಾತ್ಮಿಕ ಬಲವುಳ್ಳ ವರೂ ಸುಶಿಕ್ಷಿತರೂ ಆದರೆ ಮಾತ್ರ ಪ್ರಪಂಚದೊಳಗಿನ ದುಃಖದ ನಿವಾರಣೆ ಯಾಗುವುದು. ದೇಶದ ತುಂಬೆಲ್ಲ ಅನ್ನಸತ್ರಗಳನ್ನೂ ಆಸ್ಪತ್ರೆಗಳನ್ನೂ ಏರ್ಪಡಿಸಬಹುದು; ಆದರೆ ಮನುಷ್ಯನ ಸ್ವಭಾವಗುಣವು ವ್ಯತ್ಯಾಸ ಹೊಂದುವವರೆಗೆ ಆವನಿಗೆ ದುಃಖವು ತಪ್ಪಿದ್ದಲ್ಲ.

ನಾವು ಯಾವಾಗಲೂ ಕರ್ಮವನ್ನು ಮಾಡುತ್ತಿರಬೇಕೆಂದು ಗೀತೆಯು ಪುನಃ ಪುನಃ ಉಪದೇಶಿಸುತ್ತದೆ. ಎಲ್ಲ ಕರ್ಮಗಳೂ ಸ್ವಭಾವದಿಂದಲೇ ಗುಣದೋಷಮಿಶ್ರಿತವಾಗಿರುತ್ತವೆ. ಏನೂ ಗುಣವಿಲ್ಲದ ಕರ್ಮವೂ ಏನೂ

ದೋಷವಿಲ್ಲದ ಕರ್ಮವೂ ಸಿಗಲಾರದು. ಆದರೂ ನಾವು ಯಾವಾಗಲೂ ಕರ್ಮವನ್ನು ಮಾಡಲೇಬೇಕೆಂದು ಧರ್ಮಾಜ್ಞೆ. ಗುಣದೋಷಗಳೆರಡೂ ನಮ್ಮ ಮೇಲೆ ಪರಿಣಾಮವನ್ನುಂಟುಮಾಡುವವು. ಶುಭಕರ್ಮವು ಶುಭವನ್ನುಂಟುಮಾಡುವುದು; ಅಶುಭ ಕರ್ಮವು ಅಶುಭವನ್ನುಂಟುಮಾಡುವುದು. ಆದರೆ ಈ ಗುಣದೋಷಗಳೆರಡೂ ಶುಭಾಶುಭಗಳೆರಡೂ ಆತ್ಮನಿಗೆ ಬಂಧನಗಳೇ ಸರಿ. ಈ ಬಂಧನಕಾರಕ ಕರ್ಮದಿಂದ ಪಾರಾಗಲು ಗೀತೆಯು ಉಪದೇಶಿಸಿದ ಸಾಧನವೆಂದರೆ ಅನಾಸಕ್ತಿ. ಆಸಕ್ತಿಯನ್ನಿಡದೆ ಕರ್ಮವನ್ನು ಮಾಡಿದರೆ ಆತ್ಮನಿಗೆ ಬಂಧನವಿಲ್ಲ. ಕರ್ಮದಲ್ಲಿ ಅನಾಸಕ್ತನಾಗಿರುವುದೆಂದರೇನೆಂಬುದನ್ನು ತಿಳಿದುಕೊಳ್ಳಲು ಯತ್ನಿಸೋಣ.

ಆಸಕ್ತನಾಗದೆ ಯಾವಾಗಲೂ ಕರ್ಮವನ್ನು ಮಾಡೆಂದೇ ಗೀತೆಯ ಉಪದೇಶದ ಸಾರ. ಸರೋವರದಲ್ಲಿದ್ದ ತರಂಗಗಳಂತೆ ಮನಸ್ಸಿನಲ್ಲಿದ್ದ ತೆರೆಗಳು ಅಥವಾ ಚಿತ್ತವೃತ್ತಿಗಳು ಕಾಣದಂತಾದರೂ ಸಂಪೂರ್ಣವಾಗಿ ನಾಶ ಹೊಂದುವುದಿಲ್ಲ. ಆದರೆ ಮತ್ತೆ ಮತ್ತೆ ಆ ತೆರೆಯು ಅಥವಾ ವೃತ್ತಿಯು ಹೊರಬೀಳುವ ಲಕ್ಷಣವನ್ನು ಸ್ಥಿರಗೊಳಿಸಿಯೇ ಹೋಗುತ್ತವೆ. ಆ ತೆರೆ ಪುನಃ ಉದ್ಭವಿಸುವ ಲಕ್ಷಣಕ್ಕೇ ಸಂಸಾರವೆಂದೆನ್ನುವರು. ನಾವು ಮಾಡುವ ಪ್ರತಿಯೊಂದು ಕರ್ಮವೂ ಪ್ರತಿಯೊಂದು ಅಂಗಚಲನವಲನವೂ ನಾವು ಆಲೋಚಿಸುವ ಪ್ರತಿಯೊಂದು ವಿಚಾರವೂ ಮನಸ್ಸಿನ ಮೇಲೆ ಇಂಥ ಸಂಸ್ಕಾರಗಳನ್ನು ಮೂಡಿಸುತ್ತವೆ. ಈ ಸಂಸ್ಕಾರಗಳು ತೋರಿಕೆಗೆ ಕಾಣದಿದ್ದರೂ ಒಳಗಿನಿಂದಲೇ ತಿಳಿಯಗೊಡದೆ ತಮ್ಮ ಪರಿಣಾಮವನ್ನು ತೋರಿಸುವಷ್ಟು ಬಲವಂತವಾಗಿರುತ್ತವೆ. ಈ ಸಂಸ್ಕಾರಗಳ ಸಮುದಾಯವೇ ನಮ್ಮ ಸ್ವಭಾವಗುಣವನ್ನು ಗೊತ್ತುಪಡಿಸುತ್ತದೆ. ನನ್ನ ಪೂರ್ವಜನ್ಮದ ಸಂಸ್ಕಾರಸಮೂಹದ ಫಲವೇ ಈಗಿನ ನಾನು. ಇದಕ್ಕೆ ಸ್ವಭಾವಗುಣವೆನ್ನುವರು. ಮನುಷ್ಯನ ಸ್ವಭಾವಗುಣವನ್ನು ನಿರ್ಣಯಿಸಬೇಕಾದರೆ ಈ ಪೂರ್ವಸಂಸ್ಕಾರಸಮೂಹವನ್ನು ಮೊದಲು ತಿಳಿಯಬೇಕು. ಕಲ್ಯಾಣಕರ ಸಂಸ್ಕಾರಗಳು ಪ್ರಬಲವಾಗಿದ್ದರೆ ಸ್ವಭಾವವು ಒಳ್ಳೆಯದಾಗುವುದು; ದುಷ್ಟ ಸಂಸ್ಕಾರಗಳ ಪ್ರಾಬಲ್ಯವಾದರೆ ಸ್ವಭಾವಗುಣವು ಕೆಡುವುದು. ಒಬ್ಬ ಮನುಷ್ಯನು ದುಷ್ಟ ಶಬ್ದಗಳನ್ನು ಕೇಳಿದರೆ, ದುಷ್ಟವಿಚಾರಗಳನ್ನು ಬರಗೊಟ್ಟರೆ, ದುಷ್ಟ ಕರ್ಮಗಳನ್ನು ಮಾಡಿದರೆ, ಅವನ ಮನಸ್ಸು ದುಷ್ಟ

ಸಂಸ್ಕಾರಗಳಿಂದ ತುಂಬುವುದು. ಈ ಸಂಸ್ಕಾರಗಳು ಅವನಿಗೆ ತಿಳಿಯು ದಂತೆ ಅವನ ವಿಚಾರಸರಣಿಯ ಮೇಲೂ ಕರ್ಮದ ಮೇಲೂ ಪರಿಣಾಮ ವನ್ನುಂಟುಮಾಡುವವು. ನಿಜವಾಗಿ ಹೇಳುವುದಾದರೆ ಈ ದುಷ್ಟ ಸಂಸ್ಕಾರ ಗಳು ಯಾವಾಗಲೂ ತಮ್ಮ ಕಾರ್ಯವನ್ನು ಮಾಡುತ್ತಲೇ ಇರುವವು. ಅವುಗಳ ಪರಿಣಾಮವಾದರೂ ಅನಿಷ್ಟವಾಗಿಯೇ ಇರುವುದು. ಇಂಥ ಮನುಷ್ಯನು ದುಷ್ಟನಾಗಲೇ ಬೇಕು. ಅದರ ಹೊರತು ಬೇರೆ ಗತಿಯೇ ಇಲ್ಲ. ಈ ಸಂಸ್ಕಾರಸಮೂಹವು ದುಷ್ಟಕಾರ್ಯಗಳನ್ನು ಮಾಡಲು ಬಲವಾಗಿ ಒತ್ತಾಯಪಡಿಸುತ್ತದೆ. ಈ ಸಂಸ್ಕಾರಗಳ ಕೈಯಲ್ಲಿ ಅವನು ಗೊಂಬೆಯಂತೆ ಕುಣಿಯುವನು. ಅದರಂತೆ ಸದ್ವಿಚಾರಗಳನ್ನೂ ಸತ್ಕರ್ಮಗಳನ್ನೂ ಮಾಡಿ ದರೆ ಈ ಸಂಸ್ಕಾರಗಳ ಪರಿಣಾಮವು ಕಲ್ಯಾಣಕರವಾಗಿ ಆ ಮನುಷ್ಯನು ಒಲ್ಲೆನೆಂದರೂ ಸತ್ಕರ್ಮಗಳನ್ನು ಮಾಡಲು ಒತ್ತಾಯಪಡಿಸುವುದು. ಸತ್ಕರ್ಮಗಳನ್ನೂ ಸದ್ವಿಚಾರವನ್ನೂ ಮಾಡಿಮಾಡಿ ಸದ್ಗುಣಪೂರ್ಣ ಮನೋವೃತ್ತಿಯು ಒಮ್ಮೆ ಸ್ಥಿರವಾಗಿ ಬಲಗೊಂಡಿತೆಂದರೆ ದುಷ್ಕರ್ಮ ಗಳನ್ನು ಮಾಡಬೇಕೆಂದರೂ ಅವನ ಪೂರ್ವ ಸಂಸ್ಕಾರಗಳ ಪರಿಣಾಮವಾದ ಮನಸ್ಸು ಅವನನ್ನು ಹಾಗೆ ಮಾಡಗೊಡುವುದಿಲ್ಲ. ಅವನು ಶುಭಸಂಸ್ಕಾರ ಗಳ ವಶದಲ್ಲಿಯೇ ಸಿಕ್ಕುಬಿಡುವನು. ಈ ಸ್ಥಿತಿ ಪ್ರಾಪ್ತವಾದರೆ ಮನುಷ್ಯನ ಸ್ವಭಾವಗುಣವು ಕಲ್ಯಾಣಕಾರಕವಾಯಿತೆಂದು ಹೇಳಬಹುದು.

ಆಮೆಯು ತನ್ನ ಬೆನ್ನಿನ ಹೊದಿಕೆಯಲ್ಲಿ ತಲೆಕಾಲುಗಳನ್ನು ಮುದುಡಿ ಕೊಂಡು ಕುಳಿತಿರುತ್ತದೆ. ನೀವು ಅದನ್ನು ಹೊಡೆದು ಬಡೆದು ತುಂಡು ತುಂಡು ಮಾಡಿದರೂ ಅದು ಹೊರಗೆ ಬರುವುದಿಲ್ಲ. ಅದರಂತೆ ತನ್ನ ಮನಸ್ಸು ಇಂದ್ರಿಯಗಳನ್ನು ನಿಗ್ರಹಿಸಿದ ಮನುಷ್ಯನ ಸ್ವಭಾವಗುಣವು ಎಂದೂ ವ್ಯತ್ಯಾಸ ಹೊಂದದಷ್ಟು ಸ್ಥಿರಗೊಂಡಿರುತ್ತದೆ. ಅವನು ತನ್ನ ಅಂತಃಶಕ್ತಿಯನ್ನೆಲ್ಲ ನಿಗ್ರಹಿಸುತ್ತಾನೆ. ಅವನ ಮನಸ್ಸಿನ ವಿರುದ್ಧವಾಗಿ ಅವನನ್ನು ಹೊರಗೆಳೆಯಲಿಕ್ಕೆ ಯಾರಿಗೂ ಆಗದು. ಈ ರೀತಿ ಅಂತರಂಗ ದಲ್ಲಿಯೇ ಸದ್ವಿಚಾರಗಳು ಸುತ್ತುವರಿದು, ಚಿತ್ತದಲ್ಲೆಲ್ಲ ಶುದ್ಧಸಂಸ್ಕಾರಗಳು ಒಡಮೂಡಿ ಪರೋಪಕಾರ ಮಾಡುವ ಬುದ್ಧಿಯು ದೃಢಗೊಳ್ಳುವುದು. ಇದರಿಂದ ಇಂದ್ರಿಯಗಳನ್ನು ನಿಗ್ರಹಿಸಲಿಕ್ಕೆ ಅವನು ಸಮರ್ಥನಾಗು ವನು. ಸದ್ಗುಣಸ್ವಭಾವವು ಸ್ಥಿರಗೊಳ್ಳುವುದು ಹೀಗೆಯೇ. ಮನುಷ್ಯನು

ಸತ್ಯವನ್ನು ಹೊಂದುತ್ತಾನೆ. ಇಂಥ ಮನುಷ್ಯನು ಯಾವಾಗಲೂ ಅಪಾಯರಹಿತನಾಗುತ್ತಾನೆ. ಅವನು ಎಂದಿಗೂ ಕೇಡು ಬಗೆಯನು. ಅವನನ್ನು ಎಂಥವರ ಸಹವಾಸದಲ್ಲಿಟ್ಟರೂ ಭಯವಿಲ್ಲ. ಈ ಸದ್ವಾಸನೆಗಿಂತ ಹೆಚ್ಚಿನ ಸ್ಥಿತಿಯೊಂದಿರುವುದು. ಅದೇ ಮುಕ್ತನಾಗುವ ಲವಲವಿಕೆ. ಆತ್ಮ ಸ್ವಾತಂತ್ರ್ಯವೇ ಎಲ್ಲ ಯೋಗಗಳ ಕೊನೆಯ ಗುರಿಯೆಂದೂ ಪ್ರತಿಯೊಂದು ಯೋಗವೂ ಅದೇ ಫಲವನ್ನು ಕೊಡುವುದೆಂದೂ ನೀವು ತಿಳಿಯಬೇಕು. ಬುದ್ಧನು ಬಹುಶಃ ಧ್ಯಾನದಿಂದಲೂ ಕ್ರಿಸ್ತನು ಪ್ರಾರ್ಥನೆಯಿಂದಲೂ ದೊರಕಿಸಿದ ಸ್ಥಾನವನ್ನೇ ಕರ್ಮದಿಂದ ಮನುಷ್ಯರು ಪಡೆಯಬಹುದು. ಬುದ್ಧನು ಕರ್ಮ ಮಾಡುವ ಜ್ಞಾನಿ, ಕ್ರಿಸ್ತನು ಭಕ್ತನು. ಅವರ ಮಾರ್ಗ ಗಳು ಭಿನ್ನವಿದ್ದರೂ ಇಬ್ಬರೂ ಒಂದೇ ಗುರಿಯನ್ನು ಮುಟ್ಟಿದರು. ಮುಕ್ತಿ ಯೆಂದರೆ ಸಂಪೂರ್ಣ ಸ್ವಾತಂತ್ರ್ಯ, ಒಳಿತು ಕೆಡುಕುಗಳ ಬಂಧನದಿಂದ ಬಿಡುಗಡೆ. ಸಂಕೋಲೆ ಕಬ್ಬಿಣದ್ದೇ ಇರಲಿ, ಬಂಗಾರದ್ದೇ ಇರಲಿ ಬಂಧನವೇ ಅಲ್ಲವೇ? ನನ್ನ ಕೈಗೆ ಒಂದು ಮುಳ್ಳು ನೆಟ್ಟಿರುತ್ತದೆ; ಅದನ್ನು ಹೊರಗೆ ತೆಗೆಯುವುದಕ್ಕೆ ಮತ್ತೊಂದು ಮುಳ್ಳನ್ನು ಉಪಯೋಗಿಸುತ್ತೇನೆ. ಅದನ್ನು ತೆಗೆದ ಮೇಲೆ ಎರಡನ್ನೂ ಕೂಡಿಸಿ ಬೀಸಾಡುತ್ತೇನೆ. ಎರಡನೇ ಮುಳ್ಳನ್ನು ಇಟ್ಟುಕೊಳ್ಳುವ ಕಾರಣವಿಲ್ಲ. ಏಕೆಂದರೆ ಎರಡೂ ಮುಳ್ಳುಗಳೇ. ಸುಸಂಸ್ಕಾರಗಳಿಂದ ದುಷ್ಟ ಸಂಸ್ಕಾರಗಳನ್ನು ಪ್ರತಿಕರಿಸುತ್ತ ಎಲ್ಲ ದುಷ್ಟ ಸಂಸ್ಕಾರಗಳು ಅಳಿಸಿಹೋಗುವ ವರೆಗೆ ಅಥವಾ ನಿಗ್ರಹವಾಗಿ ಅಂಕಿತದಲ್ಲಿ ಬರುವ ವರೆಗೆ ಹೋರಾಡಬೇಕು. ಆ ಮೇಲೆ ಸುಸಂಸ್ಕಾರಗಳನ್ನು ವಶಪಡಿಸಿಕೊಳ್ಳಲು ಯತ್ನಿಸಬೇಕು.

ಹೀಗೆ ಆಸಕ್ತಿಯು ಅನಾಸಕ್ತಿಯಾಗಿ ಪರಿಣಮಿಸುವುದು. ಕರ್ಮವನ್ನು ಮಾಡುತ್ತಲೇ ಇರಬೇಕು. ಆದರೆ ಆ ಕಾರ್ಯವಾಗಲಿ ವಿಚಾರವಾಗಲಿ ಮನಸ್ಸಿನ ಮೇಲೆ ದೀರ್ಘ ಸಂಸ್ಕಾರವನ್ನು ಮಾಡಬಾರದು. ತೆರೆಗಳು ಬಂದು ಹಾಯ್ದು ಹೋಗಲಿ. ಸ್ನಾಯುಗಳೂ ಮಿದುಳೂ ಮಹಾ ಮಹಾ ಕಾರ್ಯಗಳಲ್ಲಿ ತತ್ಪರವಾಗಿರಲಿ. ಆದರೆ ಅವು ಆತ್ಮನ ಮೇಲೆ ದೀರ್ಘ ಸಂಸ್ಕಾರವನ್ನು ಮಾಡಬಾರದು. ಇದೆಂತು ಸಾಧ್ಯವಾಗಬೇಕು? ನಾವು ಮನಮುಟ್ಟಿ ಮಾಡಿದ ಯಾವ ಕಾರ್ಯವಾದರೂ ತನ್ನ ಸಂಸ್ಕಾರ ವನ್ನು ಒಡಮೂಡಿಸದೆ ಬಿಡುವುದಿಲ್ಲ.

ಹಗಲು, ಮುಂಜಾವಿನಿಂದ ಸಂಜೆಯವರೆಗೆ ನಾವು ನೂರಾರು ಜನರನ್ನು ಕಂಡಿರಬಹುದು; ಮತ್ತು ಅದರಂತೆ ನಮ್ಮ ಪ್ರೀತಿಗೆ ಪಾತ್ರರಾದವರೊಬ್ಬರನ್ನೂ ಕಾಣುತ್ತೇವೆ. ರಾತ್ರಿ ನಾವು ವಿಶ್ರಮಿಸಿಕೊಂಡಾಗ ಆ ಹಗಲು ಕಂಡ ಎಲ್ಲ ಜನರ ಮುಖಗಳನ್ನು ಸ್ಮರಿಸಿಕೊಂಡರೂ ಅವು ಮುಂದೆ ಬಂದು ನಿಲ್ಲುವುದಿಲ್ಲ. ಆ ಪ್ರೀತಿಪಾತ್ರರ ಮುಖವೊಂದೇ ಎದ್ದು ಕಾಣುವುದು. ಆ ಮುಖವನ್ನು ಒಮ್ಮೆ ಮಾತ್ರವೇ ನೋಡಿದ್ದರೂ ಅದರಲ್ಲಿ ಆಸಕ್ತಿಯನ್ನಿಟ್ಟಿರುವುದರಿಂದ ಅದು ಒಮ್ಮೆಲೆ ಮನಸ್ಸಿನೆದುರಿಗೆ ಬಂದು ನಿಲ್ಲುತ್ತದೆ. ಉಳಿದ ಮುಖಗಳ ಸಂಸ್ಕಾರಗಳು ಊರಿಕೊಂಡು ನಿಲ್ಲುವುದಿಲ್ಲ. ಆಸಕ್ತಿಯೇ ಮನಸ್ಸಿನ ಮೇಲೆ ಆಳವಾದ ಸಂಸ್ಕಾರವನ್ನು ಮೂಡಿಸುವುದು. ಹಗಲು ಕಂಡ ನೂರಾರು ಮುಖಗಳ ಚಿತ್ರಗಳು ಕಣ್ಣಿನ ಕನ್ನಡಿಯಲ್ಲಿ ಸಮನಾಗಿಯೇ ಒಡಮೂಡಿ ಮಿದುಳಿನಿಂದ ಸ್ವೀಕರಿಸಲ್ಪಟ್ಟರೂ ಮನಸ್ಸಿನ ಮೇಲೆ ಸಮವಾಗಿಯೇ ಪರಿಣಾಮವನ್ನು ಮಾಡುವುದಿಲ್ಲ. ಮುಖಗಳಲ್ಲಿ ನಾವು ಹಿಂದೆ ಎಂದೂ ಕಾಣದ ಕೇಳದ ಎಷ್ಟೋ ಹೊಸ ಮುಖಗಳು ಇರಬಹುದು. ಆದರೆ ಅವೆಲ್ಲವುಗಳಲ್ಲಿ ಒಂದು ಮುಖವು ಮಾತ್ರ ಕಣ್ಣಿಗೆ ಸ್ವಲ್ಪ ಬಿದ್ದರೂ ತನ್ನ ದೀರ್ಘ ಸಂಸ್ಕಾರಗಳನ್ನು ಊರುವುದು. ಬಹುಶಃ ಈ ಮುಖವನ್ನು ನಾವು ನಮ್ಮ ಮನಸ್ಸಿನಲ್ಲಿ ಅನೇಕ ವರ್ಷಗಳ ವರೆಗೆ ಚಿತ್ರಿಸಿಕೊಂಡಿರಬಹುದು. ಈಗಿನ ಒಂದೇ ನೋಟವು ಆ ಹಿಂದಿನ ಅನೇಕ ಸುಪ್ತ ಸಂಸ್ಕಾರಗಳನ್ನು ಎಬ್ಬಿಸಿರಬೇಕು. ಆದ್ದರಿಂದಲೇ ಉಳಿದ ಎಲ್ಲ ಮುಖಗಳಿಗಿಂತ ಈ ಮುಖದ ಸಂಸ್ಕಾರವು ಹೆಚ್ಚು ನಿಚ್ಚಳವಾಗಿ ಮೂಡುವುದು.

ಆದ್ದರಿಂದ ಅನಾಸಕ್ತನಾಗಿರು. ಪದಾರ್ಥಗಳು ತಮ್ಮ ಕೆಲಸಗಳನ್ನು ತಾವು ಸದಾ ಮಾಡುತ್ತಿರಲಿ, ಮಿದುಳು ತನ್ನ ಕೆಲಸವನ್ನು ತಾನು ಮಾಡುತ್ತಿರಲಿ. ಸತತವಾಗಿ ಕಾರ್ಯವನ್ನು ಮಾಡುತ್ತಿರು. ಆದರೆ ಮನಸ್ಸಿನಲ್ಲಿ ಒಂದು ವಾಸನೆ ಕೂಡ ಒಡಮೂಡಬಾರದು. ಈ ಭೂಮಿಯಲ್ಲಿ ಒಬ್ಬ ಪರಕೀಯ ಮನುಷ್ಯನಂತೆ ಅಥವಾ ದಾರಿಕಾರನಂತೆ ಕಾರ್ಯಮಾಡುತ್ತಿರು. ಸತತ ಕಾರ್ಯ ಮಾಡುತ್ತಿದ್ದರೂ ಬಂಧನಕ್ಕೊಳಗಾಗಬೇಡ. ಬಂಧನವು ಭಯಂಕರವಾದದ್ದು. ಈ ಜಗತ್ತು ನಮ್ಮ ಚಿರನಿವಾಸಸ್ಥಾನವಲ್ಲ. ನಾವು ದಾಟಿ ಪಾರಾಗಿ ಹೋಗತಕ್ಕ ಅನೇಕ ಅವಸ್ಥಾಂತರಗಳಲ್ಲಿ ಇದೊಂದು ಮಾತ್ರ. ಸಾಂಖ್ಯರ 'ಸೃಷ್ಟಿಯೆಲ್ಲವೂ ಆತ್ಮನಿಗಾಗಿಯೇ

ಹೊರತು ಆತ್ಮನು ಸೃಷ್ಟಿಗಾಗಿ ಅಲ್ಲ'ವೆಂಬ ಮಹತ್ವದ ಉಕ್ತಿಯನ್ನು ನೆನಪಿನಲ್ಲಿಡತಕ್ಕದ್ದು. ಸೃಷ್ಟಿಯು ಅಸ್ತಿತ್ವದಲ್ಲಿದ್ದದ್ದೇ ಆತ್ಮನ ಶಿಕ್ಷಣಕ್ಕಾಗಿ. ಅದಕ್ಕೆ ಎರಡನೆಯ ಉದ್ದೇಶವೇ ಇಲ್ಲ. ಆತ್ಮನಿಗೆ ಶಿಕ್ಷಣವನ್ನೂ, ಅದರ ಮೂಲಕ ಸ್ವಾತಂತ್ರ್ಯವನ್ನೂ ಒದಗಿಸಿಕೊಡುವುದಕ್ಕಾಗಿಯೇ ಸೃಷ್ಟಿಯಿರುವುದು. ಇದನ್ನು ಯಾವಾಗಲೂ ಲಕ್ಷ್ಯದಲ್ಲಿಟ್ಟರೆ ಸೃಷ್ಟಪದಾರ್ಥಗಳಲ್ಲಿ ನಾವು ಎಂದಿಗೂ ಆಸಕ್ತರಾಗುವುದಿಲ್ಲ. ಸೃಷ್ಟಿಯೆಂಬುದು ನಾವು ಓದತಕ್ಕ ಗ್ರಂಥವೆಂಬ, ಅದರಿಂದ ಅವಶ್ಯವಿದ್ದಷ್ಟು ಜ್ಞಾನವನ್ನು ಸಂಪಾದಿಸಿದ ಮೇಲೆ ಅದಕ್ಕೇನೂ ಬೆಲೆಯಿಲ್ಲವೆಂಬ ಅರಿವು ನಮಗೆ ಇದ್ದೇ ಇದೆ. ಆದರೆ ನಾವು ಹಾಗೆ ಆಚರಿಸದೆ ಸೃಷ್ಟಿಯ ಕೂಡ ಒಂದಾಗುತ್ತೇವೆ. ಆತ್ಮನು ಸೃಷ್ಟಿಗಾಗಿ ಇರುವನೆಂದೂ ಸ್ಥೂಲ ಶರೀರಕ್ಕಾಗಿ ಇರುವನೆಂದೂ ನಾವು ತಿಳಿಯುತ್ತೇವೆ. ಮನುಷ್ಯನು ಜೀವಿಸುವುದಕ್ಕಾಗಿ ಉಣ್ಣುತ್ತಾನೆಂಬುದನ್ನು ಮರೆತು ಉಣ್ಣುವುದಕ್ಕಾಗಿಯೇ ಜೀವಿಸುತ್ತಾನೆಂದು ತಿಳಿದು ಮಹದಪರಾಧವನ್ನು ಮಾಡುತ್ತೇವೆ. ಈ ಅಪರಾಧವನ್ನು ನಾವು ಯಾವಾಗಲೂ ಮಾಡುತ್ತಿದ್ದೇವೆ. ಸೃಷ್ಟಿಯೇ ನಾವೆಂದು ತಿಳಿದು ಅದರಲ್ಲಿ ಆಸಕ್ತರಾಗುತ್ತೇವೆ. ಈ ಆಸಕ್ತಿಯಿಂದಲೇ ಆತ್ಮನ ಮೇಲೆ ದೀರ್ಘ ಸಂಸ್ಕಾರವುಂಟಾಗಿ ಅದು ನಮ್ಮನ್ನು ಕೆಳಗೆ ದಬ್ಬಿ ಬಿಗಿದು ಗುಲಾಮರಂತೆ ದುಡಿಯಲು ಹಚ್ಚುವುದು.

ದೊರೆಯಾಗಿ ಕೆಲಸ ಮಾಡಬೇಕು; ಗುಲಾಮನಾಗಿ ಅಲ್ಲ. ಯಾವಾಗಲೂ ಕೆಲಸದಲ್ಲಿ ನಿರತನಾಗಿರಬೇಕೆನ್ನುವುದೇನೋ ನಿಜ; ಆದರೆ ಗುಲಾಮನಂತೆ ಅಲ್ಲ. ಇದೇ ಈ ಎಲ್ಲ ಉಪದೇಶದ ಮಥಿತಾರ್ಥ. ಎಲ್ಲರೂ ಹೇಗೆ ಕೆಲಸ ಮಾಡುತ್ತಿದ್ದಾರೆಂಬುದು ಕಾಣುವುದಿಲ್ಲವೇ ? ಯಾರಿಗೂ ವಿಶ್ರಾಂತಿ ಸಮಾಧಾನಗಳೇ ಇಲ್ಲ. ನೂರರಲ್ಲಿ ತೊಂಬತ್ತೊಂಬತ್ತು ಜನರು ದಾಸಾನುದಾಸರಾಗಿ ದುಡಿಯುತ್ತಾರೆ. ಇದರ ಪರಿಣಾಮವೇ ದುಃಖ. ಇದಕ್ಕೆಲ್ಲ ಸ್ವಾರ್ಥಕರ್ಮವೆಂದು ಹೇಳಬೇಕು. ಸ್ವಾತಂತ್ರ್ಯ ಪೀಠದ ಮೇಲೆ, ಪ್ರೇಮಸಿಂಹಾಸನದ ಮೇಲೆ ಪ್ರತಿಷ್ಠಿತನಾಗಿ ಕೆಲಸ ಮಾಡಬೇಕು. 'ಪ್ರೇಮ' ಶಬ್ದದ ಅರ್ಥವನ್ನು ತಿಳಿದುಕೊಳ್ಳುವುದು ಬಹಳ ಕಠಿಣ. ಮುಕ್ತಿಯು ದೊರಕುವತನಕ ಪ್ರೇಮವು ದೊರಕಲಾರದು. ಗುಲಾಮನಲ್ಲಿ ನಿಜವಾದ ಪ್ರೇಮವು ಉಂಟಾಗಲಾರದು. ನೀವು ಒಬ್ಬ ಗುಲಾಮನನ್ನು ಬೆಲೆಕೊಟ್ಟು ಕೊಂಡು ಬಂಧನಗಳಿಂದ ಬಿಗಿದು ನಿಮ್ಮ

ಸಲುವಾಗಿ ದುಡಿಯಹಚ್ಚಿದರೆ ಅವನು ಕೇವಲ ಯಂತ್ರದಂತೆ ಕೆಲಸ ಮಾಡುವನಲ್ಲದೆ ಪ್ರೇಮದಿಂದಲ್ಲ. ಅವರಂತೆ ನಾವೂ ಪ್ರಪಂಚದೊಳಗಿನ ವಿಷಯವಸ್ತುಗಳಿಗಾಗಿ ಗುಲಾಮರಂತೆ ದುಡಿದರೆ, ನಮಗೆ ನಿಜವಾದ ಪ್ರೇಮವು ದೊರಕಲಾರದು; ಮತ್ತು ನಾವು ಮಾಡಿದ ಕರ್ಮವೂ ನಿಜ ವಾದ ಕರ್ಮವಾಗಲಾರದು. ಬಂಧುಬಾಂಧವರ ಸಲುವಾಗಿಯೂ ಇಷ್ಟಮಿತ್ರರ ಸಲುವಾಗಿಯೂ ನಮ್ಮ ಸ್ವಂತದ ಸಲುವಾಗಿಯೂ ಮಾಡಿದ ಕಾರ್ಯಗಳಿಗೆಲ್ಲ ಈ ಮಾತು ಅನ್ವಯಿಸುತ್ತದೆ. ಸ್ವಾರ್ಥಕರ್ಮವೆಲ್ಲ ಗುಲಾಮನ ಕೆಲಸ. ಅದನ್ನು ಕಂಡುಹಿಡಿಯಲಿಕ್ಕೆ ಒಂದು ಒರೆಗಲ್ಲಿದೆ. ಪ್ರೇಮದ ಕರ್ಮಗಳೆಲ್ಲ ಸುಖವನ್ನುಂಟುಮಾಡುತ್ತವೆ. ಪ್ರೇಮದಿಂದ ಮಾಡಿದ ಕೆಲಸದ ಫಲವೆಂದು ಸುಖಶಾಂತಿಗಳು ದೊರಕಬೇಕು. ನಿಜ ವಾದ ಪ್ರೇಮವು ಪ್ರೇಮವನ್ನು ತೋರ್ಪಡಿಸಿದವರಿಗೂ ಪ್ರೇಮಪಾತ್ರರಾದ ವರಿಗೂ ಇಬ್ಬರಿಗೂ ದುಃಖವನ್ನೆಂದೂ ಉಂಟುಮಾಡಲಾರದು. ಒಬ್ಬ ಮನುಷ್ಯನು ಒಬ್ಬ ಸ್ತ್ರೀಯನ್ನು ಪ್ರೀತಿಸುತ್ತಾನೆಂದು ತಿಳಿಯೋಣ. ಆಕೆ ಯಾವಾಗಲೂ ತನ್ನ ಹತ್ತಿರವೇ ಇರಬೇಕೆಂದೂ ತನ್ನ ಸೇವೆ ಮಾಡುತ್ತ ಇರಬೇಕೆಂದೂ ಅವನು ಬಯಸುತ್ತಾನೆ. ಆಕೆ ಅತ್ತಿತ್ತ ಸ್ವಲ್ಪ ಅಗಲಿ ಹೋಗಲಿ, ಅವರಿವರ ಕೂಡ ಮಾತಾಡತೊಡಗಲಿ, ಅವನಿಗೆ ಅಸಹ್ಯವಾದ ಅಸೂಯೆ ಎನಿಸುವುದು. ಆಕೆ ತನ್ನ ಹತ್ತಿರವೇ ಕುಳ್ಳಿರಬೇಕು, ತನ್ನ ಹತ್ತಿರವೇ ನಿಲ್ಲಬೇಕು, ತನ್ನ ಇಚ್ಛೆಗನುಸಾರವಾಗಿಯೇ ತಿನ್ನಬೇಕು ಉಣ್ಣ ಬೇಕು, ಆಡಬೇಕು, ಓಡಾಡಬೇಕು ಎಂದು ಅವನು ಬಯಸುತ್ತಾನೆ. ಅವನು ಆಕೆಗೆ ಸರ್ವಸ್ವಿ ದಾಸನಾಗಿ ಆಕೆಯು ತನಗೆ ದಾಸಿಯಾಗಬೇಕೆಂದು ಬಯಸುತ್ತಾನೆ. ಇದು ಪ್ರೇಮವಲ್ಲ, ಪ್ರೇಮವೆಂದು ಮೂಢಮತಿಯಿಂದ ತಿಳಿದುಕೊಳ್ಳುವ ಒಬ್ಬ ಗುಲಾಮನ ಒಂದು ತರದ ಅನಾರೋಗ್ಯಕರವಾದ ಆಸಕ್ತಿ. ಅದರಿಂದ ದುಃಖವಾಗುವುದರಿಂದ ಅದು ಪ್ರೇಮವಲ್ಲ. ಅವನಿಗೆ ಇಷ್ಟವಾದುದನ್ನು ಆಕೆ ಮಾಡದಿದ್ದರೆ ಅವನಿಗೆ ದುಃಖವಾಗುವುದು. ಪ್ರೇಮಕ್ಕೆ ನೋವಿಲ್ಲ. ಪ್ರೇಮದಿಂದ ಸುಖಶಾಂತಿಗಳು ಒದಗಲೇಬೇಕು. ಅವು ಒದಗದಿದ್ದರೆ ಅದು ಪ್ರೇಮವೆ ಅಲ್ಲ, ಪ್ರೇಮದ ವಿಪರ್ಯಾಸ. ಪತಿ, ಹೆಂಡತಿ, ಮಕ್ಕಳು ಮುಂತಾದ ಇಡೀ ಪ್ರಪಂಚವನ್ನೇ ಏನೂ ದುಃಖವೂ ಅಸೂಯೆಯೂ ಸ್ವಾರ್ಥಬುದ್ಧಿಯೂ ಹುಟ್ಟದಂತೆ ಪ್ರೀತಿಸುವುದು ನಿನಗೆ

ಸಾಧಿಸಿದಾಗ ಅನಾಸಕ್ತನಾಗಿ ಕೆಲಸ ಮಾಡಲು ನೀನು ಯೋಗ್ಯನು ಆದಂತಾಯಿತು.

"ಅರ್ಜುನಾ, ಇದು ನೋಡು. ಒಂದು ಕ್ಷಣಮಾತ್ರ ನಾನು ಕರ್ಮವನ್ನು ಬಿಟ್ಟರೆ ಇಡೀ ಜಗತ್ತೇ ನಾಶಹೊಂದುವುದು. ಕರ್ಮದಿಂದ ನನಗೆ ಆಗಬೇಕಾದದ್ದೇನೂ ಇರುವುದಿಲ್ಲ. ನಾನೇ ಸರ್ವ ಸ್ವಾಮಿ. ಆದರೂ ಲೋಕಕಲ್ಯಾಣಕ್ಕಾಗಿ ಲೋಕಪ್ರೇಮದಿಂದ ಕರ್ಮ ಮಾಡುತ್ತಿದ್ದೇನೆ" ಎಂದು ಶ್ರೀಕೃಷ್ಣ ಪರಮಾತ್ಮನು ಹೇಳುತ್ತಾನೆ. ಪರಮಾತ್ಮನು ಪ್ರೇಮಮಯನಾಗಿರುವುದರಿಂದ ಅವನು ಅನಾಸಕ್ತನಾಗಿರುತ್ತಾನೆ. ಆ ನಿಜವಾದ ಪ್ರೇಮವೇ ನಮ್ಮನ್ನೂ ಅನಾಸಕ್ತರನ್ನಾಗಿ ಮಾಡಬಲ್ಲದು. ಇಂದ್ರಿಯಜನ್ಯ ಸುಖಕ್ಕಾಗಿ ವಿಷಯವಸ್ತುಗಳಲ್ಲಿ ಆಸಕ್ತಿಯುಂಟಾದರೆ ಅದು ಪ್ರೇಮವಲ್ಲ. ಜಡವಸ್ತುವು ಜಡವಸ್ತುವನ್ನು ಆಕರ್ಷಿಸಿದಂತಾಯಿತು. ಆ ಎರಡೂ ವಸ್ತುಗಳು ಹೊಂದಿಕೊಳ್ಳದಿದ್ದರೆ ದುಃಖವುಂಟಾಗುವುದು. ನಿಜವಾದ ಪ್ರೇಮವು ಈ ತರದ ಜಡದೇಹಾಸಕ್ತಿಯನ್ನು ಹೊಂದಲಾರದು. ನಿಜವಾದ ಪ್ರೇಮವುಳ್ಳವರು ಸಾವಿರಾರು ಮೈಲು ದೂರವಾಗಿ ಅಗಲಿದ್ದರೂ ಆ ಪ್ರೇಮಕ್ಕೆ ಭಂಗವೆಂದೂ ಉಂಟಾಗಲಾರದು. ಅದು ಸ್ಥಿರವಾಗಿ ನಿಲ್ಲುವುದು, ನಾಶ ಹೊಂದುವುದಿಲ್ಲ. ಆದರಿಂದ ಯಾವ ತರದ ದುಃಖವೂ ಉಂಟಾಗುವುದಿಲ್ಲ.

ಈ ತರದ ಅನಾಸಕ್ತಿಯೋಗವನ್ನು ಸಂಪಾದಿಸುವುದು ಸಾಮಾನ್ಯ ಕೆಲಸವಲ್ಲ. ಇಡೀ ಆಯುಷ್ಯವನ್ನೇ ಆದಕ್ಕಾಗಿ ವೆಚ್ಚಮಾಡಬೇಕಾಗುವುದು. ಆದರೆ ಈ ಸ್ಥಿತಿಯನ್ನು ಮುಟ್ಟಿದ ಕೂಡಲೇ ನಾವು ಪ್ರೇಮಮಂದಿರವನ್ನು ಪ್ರವೇಶಿಸಿದಂತಾಗಿ ಮುಕ್ತರಾಗುತ್ತೇವೆ. ಮಾಯಾಪ್ರಕೃತಿಯ ಬಂಧನಗಳೆಲ್ಲವೂ ಕಳಚಿಬೀಳುವವು. ಮಾಯೆಯ ನಿಜಸ್ಥಿತಿಯು ತಿಳಿದು ಬರುವುದು. ನಾವು ಮೋಹಪರವಶರಾಗುವುದಿಲ್ಲ. ನಾವು ಸಂಪೂರ್ಣ ಸ್ವತಂತ್ರರಾಗುವುದರಿಂದ ಕರ್ಮಫಲಗಳನ್ನು ಗಣನೆಗೆ ತರುವುದಿಲ್ಲ. ಆ ಮೇಲೆ ಫಲಕ್ಕಾಗಿ ಆಶಿಸುವವರಾರು?

ನೀವು ನಿಮ್ಮ ಮಕ್ಕಳಲ್ಲಿಟ್ಟ ಪ್ರೇಮಕ್ಕಾಗಿ ಅವರಿಂದ ಪ್ರತಿಫಲವನ್ನು ಅಪೇಕ್ಷಿಸುತ್ತೀರೋ? ಅವರಿಗಾಗಿ ಕೆಲಸ ಮಾಡುವುದು ನಿಮ್ಮ ಕರ್ತವ್ಯವೆಂದು ತಿಳಿದು ಮಾಡುತ್ತೀರಷ್ಟೆ? ನಿಮ್ಮ ಮಕ್ಕಳ ವಿಷಯದಲ್ಲಿ ತಾಳಿದ ಭಾವನೆಯಂತೆಯೇ ಉಳಿದ ಗ್ರಾಮ, ಪಟ್ಟಣ, ಪ್ರಾಂತಗಳ ನಿವಾಸಿಗಳಲ್ಲಿ

ಪ್ರೇಮಭಾವವನ್ನು ತಾಳಿ ಅವರಿಂದ ಪ್ರತಿಫಲವನ್ನು ಅಪೇಕ್ಷಿಸದಿರಬೇಕು. ನೀವು ಯಾವಾಗಲೂ ಪ್ರತಿಫಲವನ್ನು ಅಪೇಕ್ಷಿಸದೆ ಕೊಡುಗೈದೊರೆಯಂತೆ ಮುಕ್ತಹಸ್ತದಿಂದ ದಾನಮಾಡುತ್ತ ಪ್ರೇಮಕಾರ್ಯ ಮಾಡುತ್ತ ಹೋದರೆ ಕರ್ಮದಲ್ಲಿ ನಿಮಗೆ ಆಸಕ್ತಿಯುಂಟಾಗಲಾರದು. ಪ್ರತಿಫಲದ ಆಶೆಯಿದ್ದಲ್ಲಿ ಮಾತ್ರ ಆಸಕ್ತಿ ಇದ್ದೇ ಇದೆ.

ಗುಲಾಮರಂತೆ ದುಡಿಯುವುದರಿಂದ ಸ್ವಾರ್ಥಬುದ್ಧಿಯೂ ಆಸಕ್ತಿಯೂ ಉಂಟಾಗುವಂತೆ, ನಾವು ನಮ್ಮ ಮನಸ್ಸಿನ ದೊರೆಗಳಾಗಿ ಕರ್ಮ ಮಾಡಿದರೆ ಅನಾಸಕ್ತಿಯಿಂದುಂಟಾಗುವ ಅತ್ಯಾನಂದವು ದೊರಕುವುದು. ನ್ಯಾಯ ಸತ್ಯಗಳ ವಿಷಯದಲ್ಲಿ ನಾವು ದೊಡ್ಡ ದೊಡ್ಡ ಮಾತುಗಳನ್ನು ಆಡುತ್ತೇವೆ. ಆದರೆ ಅವು ಹಸುಗೂಸಿನ ಹುಸಿಮಾತುಗಳಂತಿರುವವೆಂದು ನಾವು ಪ್ರತ್ಯಕ್ಷ ಪ್ರಪಂಚದಲ್ಲಿ ಕಾಣುತ್ತೇವೆ. ಮನುಷ್ಯನ ಆಚರಣೆಯು ಪಾಶವೀಶಕ್ತಿ ಯನ್ನಾಗಲಿ ಭೂತದಯೆಯನ್ನಾಗಲಿ ಅವಲಂಬಿಸುತ್ತದೆ. ಮನುಷ್ಯನು ಇವೆರಡರಲ್ಲೊಂದು ಉದ್ದೇಶದಿಂದ ಪ್ರೇರಿತನಾಗಿ ಕರ್ಮಪ್ರವೃತ್ತನಾಗು ತ್ತಾನೆ. ಪಾಶವೀಶಕ್ತಿಯ ಆಟವೆಂದರೆ ಯಾವಾಗಲೂ ಸ್ವಾರ್ಥಬುದ್ಧಿಯ ಆಟ. ಎಲ್ಲ ಸ್ತ್ರೀಪುರುಷರು ತಮ್ಮಲ್ಲಿದ್ದ ಶಕ್ತಿಸರ್ವಸ್ವವನ್ನೆಲ್ಲ ಹೂಡಿ ತಮ್ಮ ಮೇಲುಗೈಮಾಡಿಕೊಳ್ಳಲು ಯತ್ನಿಸುತ್ತಾರೆ. ಭೂತದಯೆಯು ಮಾತ್ರ ಸ್ವರ್ಗೀಯವಾಗಿರುತ್ತದೆ. ನಾವು ಸಜ್ಜನರಾಗಬೇಕೆಂದರೆ ಭೂತ ದಯಾಪರರಾಗಿರಬೇಕು. ನ್ಯಾಯ ಸತ್ಯಗಳು ಭೂತದಯೆಯನ್ನು ಅವ ಲಂಬಿಸಿರಬೇಕು. ನಾವು ಮಾಡುವ ಕರ್ಮಗಳಿಗೆಲ್ಲ ಪ್ರತಿಫಲವನ್ನು ಅಪೇಕ್ಷಿ ಸುವುದರಿಂದ ನಮ್ಮ ಆತ್ಮೋನ್ನತಿಗೆ ಅಡ್ಡಿಯುಂಟಾಗುವುದು. ಕೊನೆಗೆ ದುಃಖವೂ ಉಂಟಾಗುವುದು. ಈ ಭೂತದಯೆಯ ಅಥವಾ ನಿಷ್ಕಾಮ ಕರ್ಮದ ಆಚರಣೆಗೆ ಇನ್ನೊಂದು ಮಾರ್ಗವುಂಟು. ಸಗುಣ ಪರಮಾತ್ಮನಲ್ಲಿ ನಮಗೆ ಶ್ರದ್ಧೆಯಿದ್ದರೆ 'ನಾಹಂ ಕರ್ತಾ ಹರಿಃ ಕರ್ತಾ। ತತ್ಪೂಜಾ ಕರ್ಮಚಾಖಿಲಂ ॥' ಎಂಬಂತೆ 'ನಾನು ಕರ್ತನಲ್ಲ; ಹರಿಯು ಕರ್ತನು. ಎಲ್ಲ ಕರ್ಮವೂ ಅವನ ಪೂಜೆ' ಎಂಬ ತಿಳಿವಳಿಕೆಯಿಂದ ಕರ್ಮ ಮಾಡ ಬೇಕು. ಇಲ್ಲಿ ನಮ್ಮ ಕರ್ಮಫಲವನ್ನೆಲ್ಲ ಪರಮಾತ್ಮನಿಗೆ ಅರ್ಪಿಸುತ್ತೇವೆ. ಹೀಗೆ ಉಪಾಸನೆಗಾಗಿ ಮಾಡಿದ ಕರ್ಮದ ಪ್ರತಿಫಲವನ್ನು ಜನರಿಂದ ಅಪೇಕ್ಷಿಸಲಿಕ್ಕೆ ನಮಗೆ ಅಧಿಕಾರವೇ ಇಲ್ಲ. ಸ್ವತಃ ಈಶ್ವರನು ಸತತವಾಗಿ

ಿಸಕ್ತಿಯಿಲ್ಲದೆ ಕರ್ಮ ಮಾಡುತ್ತಲಿದ್ದಾನೆ. ನೀರು ಕಮಲಪತ್ರವನ್ನು ಹೇಗೆ ತೋಯಿಸಲಾರದೋ ಹಾಗೆ ಸ್ವಾರ್ಥರಹಿತನಾದ ಮನುಷ್ಯನಲ್ಲಿ ಕರ್ಮವು ಫಲಾಸಕ್ತಿಯನ್ನುಂಟುಮಾಡಲಾರದು. ಅನಾಸಕ್ತನೂ ಸ್ವಾರ್ಥ ರಹಿತನೂ ಆದ ಮನುಷ್ಯನು ಜನಸಮ್ಮರ್ದದಿಂದ ಗಿಜಿಗಿಜಿಗುಟ್ಟುವ ಪಾಪಮಯ ಪಟ್ಟಣದ ಮಧ್ಯದಲ್ಲಿದ್ದರೂ ಪಾಪದಿಂದ ಅಲಿಪ್ತನಿರುತ್ತಾನೆ.

ಈ ತರದ ಸಂಪೂರ್ಣ ಸ್ವಾರ್ಥತ್ಯಾಗವೂ ಆತ್ಮಸಮರ್ಪಣವೂ ಮಹಾ ಭಾರತದೊಳಗಿನ ಒಂದು ಕಥೆಯಿಂದ ಮನದಟ್ಟಾಗುವುದು. ಕುರುಕ್ಷೇತ್ರದ ಯುದ್ಧದ ತರುವಾಯ ಪಂಚಪಾಂಡವರು ಒಂದು ಮಹಾಯಜ್ಞವನ್ನು ಮಾಡಿ ಬಡಬಗ್ಗರಿಗೆ ಹೇರಳವಾದ ದ್ರವ್ಯವನ್ನು ದಾನಮಾಡಿದರು. ಯಜ್ಞ ದಲ್ಲಾದ ಅಪಾರದ್ರವ್ಯದ ವೆಚ್ಚವನ್ನೂ ವೈಭವವನ್ನೂ ನೋಡಿ ಎಲ್ಲರೂ ಬೆರಳುಕಚ್ಚಿದರು. ಜಗತ್ತಿನಲ್ಲಿ ಇಂಥ ಯಜ್ಞವು ಇಷ್ಟು ವೈಭವಪೂರ್ಣವಾಗಿ ಎಂದೂ ಆಗಿದ್ದಿಲ್ಲವೆಂದು ಸರ್ವರೂ ಮಾತಾಡಿದರು. ಆದರೆ ಯಜ್ಞಸಮಾ ರಂಭವು ಮುಗಿದಮೇಲೆ ಒಂದು ಮುಂಗುಲಿ ಬಂತು. ಅದರ ಅರ್ಧ ಶರೀರವು ಸುವರ್ಣಮಯವಾಗಿತ್ತು. ಉಳಿದ ಅರ್ಧ ಶರೀರವು ಮೊದಲಿನಂತೆ ಬೂದು ಬಣ್ಣದ್ದಿತ್ತು. ಅದು ಯಜ್ಞಮಂಟಪದಲ್ಲಿ ನೆಲದ ಮೇಲೆ ಉರುಳಾಡ ತೊಡಗಿತು. ಆ ಮೇಲೆ ಸುತ್ತಲೂ ನೆರೆದಿದ್ದ ಜನರನ್ನುದ್ದೇಶಿಸಿ ‘ ನೀವು ಆಡುವುದೆಲ್ಲ ಸುಳ್ಳು. ಇದು ಯಜ್ಞವೇ ಅಲ್ಲ ’ವೆಂದು ನುಡಿಯಿತು. ಅದಕ್ಕೆ ಜನರು ‘ ಏನಿದು ! ಇದು ಯಜ್ಞವೇ ಅಲ್ಲವೆಂದು ಹೇಳುವೆಯಲ್ಲ ? ಬಡ ಬಗ್ಗರಿಗಾಗಿ ಎಷ್ಟು ಅಪಾರ ಸಂಪತ್ತೂ ಮುತ್ತು ರತ್ನಗಳೂ ದಾನವಾಗಿ ಸೂರೆಯಾದವೆಂಬುದೂ, ಎಲ್ಲರೂ ಸುಖಿಗಳೂ ಶ್ರೀಮಂತರೂ ಆದ ರೆಂಬುದೂ ನಿನಗೆ ಗೊತ್ತಿಲ್ಲವೆ? ಇಂಥ ಅತ್ಯಾಶ್ಚರ್ಯಕರವಾದ ಯಜ್ಞ ವನ್ನು ಹಿಂದೆ ಯಾರೂ ಮಾಡಿದ್ದಿಲ್ಲ ’ ಎಂದು ಹೇಳಿದರು. ಅದಕ್ಕೆ ಪ್ರತ್ಯು ತ್ತರವಾಗಿ ಆ ಮುಂಗುಲಿಯು ಒಂದು ವೃತ್ತಾಂತವನ್ನು ಹೇಳಿತು—

“ ಒಂದಾನೊಂದು ಕಾಲದಲ್ಲಿ ಒಂದು ಸಣ್ಣ ಹಳ್ಳಿಯಲ್ಲಿ ಒಬ್ಬ ಬಡ ಬ್ರಾಹ್ಮಣನು ಹೆಂಡತಿ, ಮಗ ಮತ್ತು ಸೊಸೆಯಿಂದೊಡಗೂಡಿ ವಾಸವಾಗಿ ದ್ದನು. ಅವನು ಬಹಳ ಬಡವನಾಗಿದ್ದನು. ಪುರಾಣ ಪ್ರವಚನ ಅಧ್ಯಾಪ ನಾದಿಗಳಿಂದ ಬಂದ ಅಲ್ಪಸ್ವಲ್ಪ ದಾನ ದ್ರವ್ಯದಿಂದ ಚರಿತಾರ್ಥವನ್ನು ಸಾಗಿಸಿಕೊಂಡು ಹೋಗುತ್ತಿದ್ದನು. ಆ ಪ್ರದೇಶದಲ್ಲಿ ಒಮ್ಮೆ ಮೂರು

ವರ್ಷದವರೆಗೆ ಉಗ್ರವಾದ ಬರ ಬಿತ್ತು. ಈ ಬಡ ಬ್ರಾಹ್ಮಣನ ಕುಟುಂಬವು ಬಹಳ ಕಷ್ಟಕ್ಕೆ ಗುರಿಯಾಯಿತು. ಇಡಿಯ ಕುಟುಂಬವೇ ಅನೇಕ ದಿನಗಳವರೆಗೆ ಉಪವಾಸ ಬಿದ್ದ ಮೇಲೆ ಕೊನೆಗೊಂದು ದಿನ ಮುಂಜಾನೆ ತಂದೆಯು ಸುದೈವದಿಂದ ಅಂದು ತಾನು ದೊರಕಿಸಿದ ಸ್ವಲ್ಪ ಜೋಳದ ಹಿಟ್ಟನ್ನು ಮನೆಗೆ ತಂದನು. ಅದರಲ್ಲಿ ಒಬ್ಬೊಬ್ಬರಿಗೆ ಒಂದೊಂದರಂತೆ ನಾಲ್ಕು ಭಾಗಗಳನ್ನು ಮಾಡಿದನು. ಅವರು ಅದನ್ನು ಅಟ್ಟು ಇನ್ನು ಉಣ್ಣಬೇಕೆನ್ನುವಷ್ಟರಲ್ಲಿ ಹೊರಬಾಗಿಲು ಬಡಿದ ಸದ್ದಾಯಿತು. ತಂದೆಯು ಬಾಗಿಲು ತೆರೆದಾಗ ಒಬ್ಬ ಅತಿಥಿಯು ನಿಂತಿದ್ದನು. ಪುಣ್ಯ ಭರತಭೂಮಿಯಲ್ಲಿ ಅತಿಥಿಯೆಂದರೆ ಪುಣ್ಯಪುರುಷ. ಆ ಕಾಲಕ್ಕೆ ಅವನು ದೇವರ ಹಾಗೆ. ಅವನನ್ನು ದೇವನಂತೆ ಪೂಜಿಸಬೇಕು. ಆದ್ದರಿಂದ ಆ ಬಡ ಬ್ರಾಹ್ಮಣನು 'ಬನ್ನಿ ಸ್ವಾಮಿ, ದಯಮಾಡಿಸಿ, ಬಹಳ ಸಂತೋಷ!' ಎಂದು ಅವನನ್ನು ಆದರದಿಂದ ಒಳಗೆ ಬರಮಾಡಿಕೊಂಡು ತನ್ನ ಭಾಗದ ಆಹಾರವನ್ನು ಅವನ ಎದುರಿಗಿಟ್ಟನು. ಅದನ್ನು ಅತಿಥಿಯು ಕೂಡಲೇ ತಿಂದು, 'ಅಯ್ಯಾ, ನೀವು ನನ್ನ ಪ್ರಾಣಹರಣಮಾಡುತ್ತಿದ್ದೀರಿ. ಈಗ ಹತ್ತು ದಿನಗಳಿಂದ ನನಗೆ ಉಪವಾಸ. ನೀವೀಗ ಕೊಟ್ಟ ಅಲ್ಪಾಹಾರವು ನನ್ನ ಹಸಿವನ್ನು ಮತ್ತಿಷ್ಟು ಹೆಚ್ಚಿಸಿದೆ' ಎಂದು ಕೂಗತೊಡಗಿದನು. ಆಗ ಹೆಂಡತಿಯು ತನ್ನ ಗಂಡನಿಗೆ 'ನನ್ನ ಭಾಗವನ್ನು ಅತಿಥಿಗೆ ಕೊಡಿರಿ' ಎಂದು ಹೇಳಿದಳು. ಪತಿಯು ಹಾಗಾಗಲಾರದೆಂದು ಹೇಳಿದನು. ಆದರೆ ಅವಳು 'ಈಗ ಈ ಬಡ ಮನುಷ್ಯನು ನಮ್ಮಲ್ಲಿಗೆ ಬಂದಿದ್ದಾನೆ. ಅವನಿಗೆ ಹೊಟ್ಟೆತುಂಬ ಬಡಿಸುವುದು ಗೃಹಸ್ಥಾಶ್ರಮಿಗಳಾದ ನಮ್ಮ ಕರ್ತವ್ಯ. ನಿಮ್ಮಲ್ಲೇನೂ ಉಳಿಯದ್ದರಿಂದ ನನ್ನ ಆಹಾರಭಾಗವನ್ನು ಅತಿಥಿಗೆ ಕೊಡುವುದು ಪತ್ನೀಧರ್ಮವಾಗಿದೆ' ಎಂದು ಹೇಳಿ ತನ್ನ ಆಹಾರ ಭಾಗವನ್ನು ಅತಿಥಿಗೆ ಅರ್ಪಿಸಿದಳು. ಅದನ್ನು ಅತಿಥಿಯು ತಿಂದು, ತನ್ನ ಹಸಿವು ಇನ್ನೂ ಪ್ರಖರವಾಗಿರುವುದೆಂದು ಹೇಳಿದನು. ಆಗ ಮಗನು 'ನನ್ನ ಆಹಾರಭಾಗವನ್ನೂ ತೆಗೆದುಕೊಳ್ಳಿರಿ. ತಂದೆಗೆ ತನ್ನ ಕರ್ತವ್ಯಗಳನ್ನು ಪಾಲಿಸುವುದರಲ್ಲಿ ನೆರವಾಗುವುದು ಮಗನ ಕರ್ತವ್ಯವಾದ್ದರಿಂದ ನನ್ನ ಆಹಾರಭಾಗವನ್ನೂ ಸ್ವೀಕರಿಸಿರಿ' ಎಂದು ಹೇಳಿದನು. ಅತಿಥಿಯು ಅದನ್ನೂ ತಿಂದು ಹಸಿವು ಇನ್ನೂ ಅಡಗಲಿಲ್ಲವೆಂದು ಅತೃಪ್ತಿಯನ್ನು ತೋರ್ಪಡಿಸಿದನು. ಆಗ ಸೊಸೆ ತನ್ನ

ಆಹಾರಭಾಗವನ್ನೂ ಕೊಟ್ಟಳು. ಅದರಿಂದ ಅತಿಥಿಗೆ ತೃಪ್ತಿಯಾಗಿ ಅವನು ಈ ಕುಟುಂಬವನ್ನು ಆಶೀರ್ವದಿಸಿ ಹೊರಟುಹೋದನು. ಆ ರಾತ್ರಿ ಈ ನಾಲ್ವರೂ ಉಪವಾಸದಿಂದ ಸತ್ತರು. ಅಲ್ಲಿ ಹಿಟ್ಟಿನ ಕೆಲವು ಸಣ್ಣ ಕಣಗಳು ನೆಲದ ಮೇಲೆ ಬಿದ್ದಿದ್ದವು. ಅವುಗಳ ಮೇಲೆ ನನ್ನ ದೇಹವನ್ನು ಉರುಳಿಸ ಲಾಗಿ ಅರ್ಧ ಶರೀರವು ನೀವು ಈಗ ಕಾಣುವಂತೆ ಸುವರ್ಣಮಯವಾಯಿತು. ಅಂದಿನಿಂದ ಇಂದಿನವರೆಗೆ ಅಂಥ ಮತ್ತೊಂದು ಯಜ್ಞವನ್ನು ಕಾಣ ಬೇಕೆಂದು ಜಗತ್ತಿನಲ್ಲೆಲ್ಲ ನಾನು ಪ್ರವಾಸಮಾಡುತ್ತಿದ್ದೇನೆ. ಆದರೆ ನನ್ನ ಆಸೆ ಈ ವರೆಗೂ ಈಡೇರಲಿಲ್ಲ. ನನ್ನ ಉಳಿದ ಅರ್ಧ ಶರೀರವು ಸುವರ್ಣ ಮಯವಾಗದೆ ಇನ್ನೂ ಹೀಗೇ ಉಳಿದಿದೆ. ಆದ್ದರಿಂದಲೇ ಇದು ಯಜ್ಞ ವಲ್ಲವೆಂದು ಹೇಳಿದೆನು."

ಈ ತರದ ದಾನಪದ್ಧತಿಯೂ ಆ ಅತಿಥಿಸತ್ಕಾರವೂ ಆತ್ಮಸಮರ್ಪಣ ಬುದ್ಧಿಯೂ ಭರತಖಂಡದಲ್ಲಿ ಈಗ ಮಾಯವಾಗುತ್ತಿವೆ. ದೊಡ್ಡ ಮನು ಷ್ಯರು ಅಪರೂಪರಾಗುತ್ತಿದ್ದಾರೆ. ನಾನು ಮೊದಲು ಇಂಗ್ಲಿಷ್ ಕಲಿಯು ತ್ತಿದ್ದಾಗ ಒಂದು ಇಂಗ್ಲಿಷ್ ಕತೆಯ ಪುಸ್ತಕವನ್ನು ಓದಿದೆನು. ಅದರಲ್ಲಿ ಒಬ್ಬ ಕರ್ತವ್ಯನಿರತ ಬಾಲಕನ ಕತೆಯಿತ್ತು. ಅವನು ಹೊರಗೆ ಹೋಗಿ ಕೆಲಸ ಮಾಡಿ ತಾನು ಗಳಿಸಿದ ಹಣವನ್ನು ತನ್ನ ಮುದಿತಾಯಿಯ ಕೈಯಲ್ಲಿ ತಂದುಕೊಟ್ಟನು. ಈ ಸದ್ಗುಣವನ್ನು ಮೂರು ನಾಲ್ಕು ಪುಟಗಳಲ್ಲಿ ಬಹಳ ವಾಗಿ ಹೊಗಳಿದ್ದರು. ಅದರ ಅರ್ಥವೇನು? ಆ ಕಥೆಯಿಂದ ಯಾವ ದೊಡ್ಡ ನೀತಿಯ ಪಾಠವನ್ನು ಅರಿತುಕೊಳ್ಳಬೇಕೆಂಬುದು ಹಿಂದೂ ಬಾಲಕ ರಿಗೆ ತಿಳಿಯದ ಮಾತು. ನನಗೆ ಅದು ಈಗ ತಿಳಿಯಿತು. ಪ್ರತಿಯೊಬ್ಬನು ತನ್ನಷ್ಟಕ್ಕೆ ತಾನಾಗಿರಬೇಕೆಂಬುದೇ ಪಾಶ್ಚಿಮಾತ್ಯರ ಕಲ್ಪನೆ. ಕೆಲವ ರಂತೂ ಎಲ್ಲವನ್ನೂ ತಮಗಾಗಿಯೇ ಇಟ್ಟುಕೊಂಡು ತಾಯಿತಂದೆ ಹೆಂಡಿರು ಮಕ್ಕಳನ್ನು ಕೂಡ ತಿರಸ್ಕರಿಸುವರು. ಇದು ಎಂದಿಗೂ ಎಲ್ಲಿಯೂ ಗೃಹಸ್ಥನ ಧರ್ಮವಾಗಿರಕೂಡದು.

ಕರ್ಮಯೋಗವೆಂದರೇನೆಂಬುದು ಈಗ ತಿಳಿಯಿತು. ಏಕೆ, ಏನು, ಎಂದು ಯೋಚಿಸದೆ ಮರಣ ಬಂದರೂ ಪರೋಪಕಾರವನ್ನು ಮಾಡುತ್ತಿರು ವುದೇ ಕರ್ಮಯೋಗ. ಸಾವಿರ ಸಲ ಮೋಸಹೋದರೂ ಚಿಂತೆಯಿಲ್ಲ; ಪಿಟ್ಟೆಂದು ಮಿಸುಕದೆ ನಾನು ಏನು ಮಾಡುತ್ತಿರುವೆನೆಂಬುದನ್ನು ಕೂಡ

ಚಿಂತಿಸದೆ ಕರ್ತವ್ಯತತ್ಪರನಾಗಿರಬೇಕು. ಬಡಬಗ್ಗರಿಗೆ ಕೊಟ್ಟ ದಾನವನ್ನು ಹೊಗಳಿಕೊಳ್ಳಬೇಡಿರಿ. ಅವರು ನಿಮಗೆ ಕೃತಜ್ಞರಾಗಿರಬೇಕೆಂದೂ ಅಪೇಕ್ಷಿಸಬೇಡಿರಿ. ದಾನಕೊಡುವ ಸಂದರ್ಭವನ್ನು ಅವರು ನಿಮಗೆ ತಂದು ಕೊಟ್ಟದ್ದಕ್ಕಾಗಿ ಅವರಿಗೇ ನೀವು ಕೃತಜ್ಞರಾಗಿರಬೇಕು. ಆದರ್ಶಭೂತ ಗೃಹಸ್ಥಾಶ್ರಮಿಯಾಗುವುದು ಹೆಚ್ಚು ಕಠಿಣವೆಂಬುದು ಈಗ ಸ್ಪಷ್ಟವಾದಂತಾಯಿತು. ನಿಜವಾದ ಸನ್ಯಾಸಮಾರ್ಗಕ್ಕಿಂತಲೂ ನಿಜವಾದ ಕರ್ಮಯೋಗ ಮಾರ್ಗವು ಹೆಚ್ಚು ಕಠಿಣವಲ್ಲದಿದ್ದರೂ ಅಷ್ಟೇ ಕಠಿಣವಿರುವುದೆಂದು ನಿಸ್ಸಂದೇಹವಾಗಿ ಹೇಳಬಹುದು.



೪

## ಕರ್ತವ್ಯವೆಂದರೇನು ?

ಕರ್ಮಯೋಗದ ವಿವೇಚನೆಯಲ್ಲಿ ಕರ್ತವ್ಯವೆಂದರೇನೆಂಬುದನ್ನು ಅರಿತುಕೊಳ್ಳುವುದು ಅವಶ್ಯವಿದೆ. ನಾನು ಏನನ್ನಾದರೂ ಮಾಡುವ ಮುಂಚೆ, ಅದು ನನ್ನ ಕರ್ತವ್ಯವೆಂದು ತಿಳಿದುಕೊಳ್ಳಬೇಕು. ಎಂದರೆ ಆ ಮೇಲೆ ಅದನ್ನು ಮಾಡಲಿಕ್ಕಾಗುವುದು. ಕರ್ತವ್ಯದ ಕಲ್ಪನೆ ಭಿನ್ನ ಭಿನ್ನ ದೇಶಗಳಲ್ಲಿ ಭಿನ್ನ ಭಿನ್ನವಾಗಿರುತ್ತದೆ. ತನ್ನ ಗ್ರಂಥವಾದ ಕುರಾನಿನಲ್ಲಿ ಬರೆದದ್ದೇ ಕರ್ತವ್ಯವೆಂದು ಮುಸಲ್ಮಾನನು ಹೇಳುತ್ತಾನೆ. ವೇದದಲ್ಲಿ ಹೇಳಿದ್ದು ಕರ್ತವ್ಯವೆಂದು ಹಿಂದುವಿನ ಮತ. ಅದರಂತೆ ಬೈಬಲ್ಲಿನಲ್ಲಿ ಹೇಳಿದ್ದು ತನ್ನ ಕರ್ತವ್ಯವೆಂದು ಕ್ರೈಸ್ತನ ಅಭಿಪ್ರಾಯ. ದೇಶ ಕಾಲ ಪರಿಸ್ಥಿತಿ ಮತ್ತು ಅವಸ್ಥಾಂತರಗಳಲ್ಲಿ ಕರ್ತವ್ಯದ ಭಾವನೆ ಭಿನ್ನವಾಗುವುದು. 'ಕರ್ತವ್ಯ' ಶಬ್ದದ ವ್ಯಾಖ್ಯೆಯನ್ನು ಸ್ಪಷ್ಟವಾಗಿಯೂ ನಿಶ್ಚಿತವಾಗಿಯೂ ಹೇಳುವುದು ಬಹಳ ಕಠಿಣ. ಪ್ರತ್ಯಕ್ಷ ವ್ಯವಹಾರದಿಂದಲೂ ಅದರ ಪರಿಣಾಮದಿಂದಲೂ ಕರ್ತವ್ಯದ ಕಲ್ಪನೆಯನ್ನು ಮಾಡಿಕೊಳ್ಳಬಹುದು. ಕೆಲ ಸಂಗತಿಗಳು ನಮ್ಮೆದುರಿಗೆ ನಡೆದರೆ ಕೆಲವೊಂದು ವಿಶಿಷ್ಟ ರೀತಿಯಲ್ಲೇ ಆಚರಿಸಲು ನಮ್ಮಲ್ಲಿ ಸಹಜವಾದ ಮನೋಭಾವನೆಯುಂಟಾಗುವುದು. ಈ

ಸಹಜ ಮನೋವಾಸನೆಯುಂಟಾದ ಕೂಡಲೇ ಮನಸ್ಸು ಆ ಪರಿಸ್ಥಿತಿಯ ವಿಷಯದಲ್ಲಿ ಯೋಚಿಸತೊಡಗುತ್ತದೆ. ಒಂದು ಸಂದರ್ಭದಲ್ಲಿ ಅಥವಾ ಪರಿಸ್ಥಿತಿಯಲ್ಲಿ ಒಂದು ವಿಶಿಷ್ಟ ರೀತಿಯಲ್ಲಿ ವರ್ತಿಸುವುದು ಯೋಗ್ಯವೆಂದು ಮನಸ್ಸಿಗೆ ತೋರಿದರೆ, ಮತ್ತೊಂದು ವೇಳೆಯಲ್ಲಿ ಅದೇ ಪರಿಸ್ಥಿತಿ ಅಥವಾ ಸಂದರ್ಭದಲ್ಲಿ ಕೂಡ ಅದೇ ರೀತಿಯಲ್ಲಿ ವರ್ತಿಸುವುದು ಯೋಗ್ಯವಾಗಲಾರದೆಂದು ತೋರಬಹುದು. ಪ್ರತಿಯೊಬ್ಬ ಸಜ್ಜನನು ತನ್ನ ಸದಸದ್ವಿವೇಕ ಬುದ್ಧಿಗನುಸರಿಸಿ ನಡೆಯುತ್ತಾನೆಂದು ಸರ್ವಸಾಮಾನ್ಯವಾಗಿ ಕರ್ತವ್ಯದ ಕಲ್ಪನೆಯಿದೆ. ಆದರೆ ಯಾವ ಕೃತಿಗೆ ಅಥವಾ ಆಚಾರಕ್ಕೆ ಕರ್ತವ್ಯವೆನ್ನಬೇಕು? ಒಬ್ಬ ಕ್ರೈಸ್ತನು ತನ್ನೆದುರಿಗಿರುವ ಗೋಮಾಂಸವನ್ನು ತನ್ನ ಪ್ರಾಣರಕ್ಷಣೆಗಾಗಿ ತಿನ್ನದಿದ್ದರೆ ಅಥವಾ ಮತ್ತೊಬ್ಬನ ಪ್ರಾಣವನ್ನು ಉಳಿಸುವುದಕ್ಕಾಗಿ ಕೊಡದಿದ್ದರೆ, ತನ್ನ ಕರ್ತವ್ಯವನ್ನು ಮಾಡಲಿಲ್ಲವೆಂದು ಅವನಿಗೆ ತೋರುತ್ತದೆ. ಆದರೆ ಒಬ್ಬ ಹಿಂದುವು ಅದನ್ನು ತಿಂದರೆ ಅಥವಾ ತಿನ್ನಲು ಮತ್ತೊಬ್ಬ ಹಿಂದುವಿಗೆ ಕೊಟ್ಟರೆ, ತಾನು ತನ್ನ ಕರ್ತವ್ಯವನ್ನು ಮಾಡಲಿಲ್ಲವೆಂದು ಅವನಿಗೆನಿಸುತ್ತದೆ. ಹಿಂದುವಿನ ಸಂಸ್ಕಾರಬಲವೂ ಶಿಕ್ಷಣವೂ ಅವನಿಗೆ ಹಾಗೆ ತಿಳಿದುಕೊಳ್ಳುವಂತೆ ಮಾಡುತ್ತವೆ. ಕಳೆದ ಶತಮಾನದಲ್ಲಿ ಹಿಂದುಸ್ಥಾನದಲ್ಲಿ ಠಕ್ಕರೆಂಬ ಪ್ರಸಿದ್ಧ ಸುಲಿಗೆಗಾರರ ಗುಂಪುಗಳಿದ್ದವು. ತಮಗೆ ಶಕ್ಯವಿದ್ದ ಮನುಷ್ಯನನ್ನು ಕೊಲ್ಲುವುದೂ ಅವನ ವಿತ್ತಾಪಹರಣ ಮಾಡುವುದೂ ತಮ್ಮ ಕರ್ತವ್ಯವೆಂದು ಅವರು ತಿಳಿದಿದ್ದರು. ತಾವು ಕೊಂದ ಜನರ ಸಂಖ್ಯೆ ಹೆಚ್ಚಾದಂತೆ ತಾವು ಹೆಚ್ಚು ಸುಸ್ಥಿತಿಯನ್ನು ಹೊಂದಿದೆವೆಂದು ಅವರು ಭಾವಿಸುತ್ತಿದ್ದರು. ಸಾಮಾನ್ಯವಾಗಿ ಒಬ್ಬ ಮನುಷ್ಯನು ಬೀದಿಗೆ ಬಂದು ಮತ್ತೊಬ್ಬನನ್ನು ಗುಂಡಿನಿಂದ ಕೊಂದರೆ, ತಾನು ಮಾಡಿದ ಅಧಮ ಕೃತ್ಯಕ್ಕಾಗಿ ಅವನಿಗೆ ದುಃಖವೆನಿಸುವುದು ಸಹಜವಿದೆ. ಆದರೆ ಅದೇ ಮನುಷ್ಯನು ಸೈನಿಕನಾಗಿ ಬಂದು ಯುದ್ಧಭೂಮಿಯಲ್ಲಿ ಒಬ್ಬನನ್ನಲ್ಲ, ಇಪ್ಪತ್ತು ಜನರನ್ನು ಕೊಂದಾಗಲೂ ತನ್ನ ಕರ್ತವ್ಯವನ್ನು ಚನ್ನಾಗಿ ಮಾಡಿದೆನೆಂದು ಅವನಿಗೆ ಸಂತೋಷವೆನಿಸುವುದು ನಿಶ್ಚಿತ. ಆದ್ದರಿಂದ ಇಂಥ ಕೃತಿಯೇ ಕರ್ತವ್ಯವೆಂದು ನಿಶ್ಚಯಿಸಿ ಹೇಳುವುದು ಶಕ್ಯವಿಲ್ಲ. ಆದರೆ ಮನೋಭಾವನೆಯ ದೃಷ್ಟಿಯಿಂದ ಕರ್ತವ್ಯದ ಅರ್ಥವನ್ನು ಹೇಳಬಹುದು. ದೇವರೆಡೆಗೆ ಹೋಗಲು ಅನುಕೂಲವಾದ ಕರ್ಮವೆಲ್ಲವೂ

ಸತ್ಕಾರ್ಯ. ಅದೇ ಕರ್ತವ್ಯ. ಅಧೋಗತಿಗೆ ಒಯ್ಯುವಂಥ ಕರ್ಮವೆಲ್ಲವೂ ದುಷ್ಕರ್ಮ. ಅದು ನಮ್ಮ ಕರ್ತವ್ಯವಲ್ಲ. ಮನೋಭಾವನೆಯ ದೃಷ್ಟಿ ಯಿಂದ ಯೋಚಿಸಲಾಗಿ ಕೆಲವೊಂದು ಕರ್ಮಗಳು ಮನಸ್ಸನ್ನು ಉಜ್ವಲ ಗೊಳಿಸಿ ಅದನ್ನು ಮೇಲಕ್ಕೆತ್ತುತ್ತವೆ. ಮತ್ತೆ ಕೆಲವು ನಮ್ಮನ್ನು ಪಶುವರ್ಗ ಕ್ಕಿಳಿಸಿ ಅಧೋಗತಿಗೆ ಒಯ್ಯುತ್ತವೆ. ಆದರೆ ವಿವಿಧ ತರದ ಪರಿಸ್ಥಿತಿಗಳಲ್ಲಿ ವಿವಿಧ ತರದ ಮನುಷ್ಯರಲ್ಲಿ ಯಾವ ಕರ್ಮಗಳು ಯಾವ ಭಾವನೆಯನ್ನುಂಟು ಮಾಡುತ್ತವೆಂಬುದನ್ನು ಕಂಡುಹಿಡಿಯುವುದು ಶಕ್ಯವಿಲ್ಲ. ಆದರೂ ಕರ್ತ ವ್ಯದ ಒಂದು ಕಲ್ಪನೆಯು ಮಾತ್ರ ಸರ್ವಸಾಮಾನ್ಯವಾಗಿ ಎಲ್ಲ ದೇಶ, ಕಾಲ, ಪರಿಸ್ಥಿತಿ, ಮತಾಚಾರಗಳಲ್ಲಿಯೂ ಸ್ವೀಕೃತವಾಗಿರುತ್ತದೆ. ಅದನ್ನು ಒಂದು ಸಂಸ್ಕೃತ ಶ್ಲೋಕವು ಒಂದೇ ಮಾತಿನಲ್ಲಿ ಹೇಳುತ್ತದೆ: 'ಪರೋಪಕಾರಃ ಪುಣ್ಯಾಯ, ಪಾಪಾಯ ಪರಪೀಡನಂ'–ಪರೋಪಕಾರವೇ ಪುಣ್ಯ, ಕರ್ತವ್ಯ; ಪರಪೀಡೆಯೇ ಪಾಪ. ಅದು ಕರ್ತವ್ಯವಲ್ಲ.

ವರ್ಣಾಶ್ರಮ ಧರ್ಮಗಳನ್ನು ಪರಿಪಾಲಿಸಬೇಕೆಂದು ಭಗವದ್ಗೀತೆ ಮೇಲಿಂದ ಮೇಲೆ ಬೋಧಿಸುತ್ತದೆ. ವಿವಿಧವಾದ ಜೀವನ ಕಲಹದಲ್ಲಿ ವಿವಿಧ ಕರ್ಮಗಳ ಬಗೆಗೆ ಯಾವ ಜನರು ಯಾವ ಮನೋಭಾವನೆಯನ್ನೂ ನೈತಿಕ ಭಾವನೆಯನ್ನೂ ತಾಳಬೇಕೆಂಬುದನ್ನು ವರ್ಣಾಶ್ರಮಗಳು ನಿರ್ಣಯಿಸುತ್ತವೆ. ಆದ್ದರಿಂದ ನಾವು ಜನ್ಮವೆತ್ತಿದ ಸಮಾಜದ ಆದರ್ಶ ಧ್ಯೇಯಗಳಿಗನುಸರಿಸಿ ಅಲ್ಲಿಯ ವ್ಯವಹಾರಪದ್ಧತಿಯಂತೆ ನಮ್ಮ ಮನ ಸ್ಸನ್ನು ಉನ್ನತಗೊಳಿಸುವಂಥ ಕರ್ಮಗಳನ್ನು ಮಾಡುವುದು ನಮ್ಮ ಕರ್ತವ್ಯ. ಆದರೆ ಅವೇ ಆದರ್ಶಗಳು ಎಲ್ಲ ದೇಶಗಳಲ್ಲಿಯೂ ಎಲ್ಲ ಸಮಾಜಗಳಲ್ಲಿಯೂ ಪ್ರಚಲಿತವಿಲ್ಲೆಂಬುದನ್ನು ಗಮನದಲ್ಲಿಡಬೇಕು. ಈ ತತ್ವದ ಅಜ್ಞಾನವೇ ಒಂದು ರಾಷ್ಟ್ರವು ಮತ್ತೊಂದು ರಾಷ್ಟ್ರವನ್ನು ದ್ವೇಷಿಸಲಿಕ್ಕೆ ಕಾರಣವಾಗು ತ್ತದೆ. ಅಮೇರಿಕೆಯ ಮನುಷ್ಯನು ತನ್ನ ದೇಶಪದ್ಧತಿಗನುಸರಿಸಿ ಮಾಡಿ ದ್ದೆಲ್ಲ ಉತ್ತಮವಾದ ಕಾರ್ಯವೆಂದೂ ಅದಕ್ಕೆ ವಿರುದ್ಧವಾಗಿ ವರ್ತಿಸುವವ ರೆಲ್ಲರೂ ಅತಿ ದುಷ್ಟರೆಂದೂ ತಿಳಿಯುತ್ತಾನೆ. ಹಿಂದುವು ಜಗತ್ತಿನಲ್ಲೆಲ್ಲ ತನ್ನ ಆಚಾರ ಪದ್ಧತಿಗಳೇ ಯೋಗ್ಯವಾದವುಗಳೆಂದೂ ಉತ್ಕೃಷ್ಟವಾದಗಳೆಂದೂ

ನಂಬಿ ಅವುಗಳನ್ನು ಪಾಲಿಸದಿದ್ದವರೆಲ್ಲ ನೀಚರೆಂದು ಭಾವಿಸುತ್ತಾನೆ. ನಾವೆಲ್ಲರೂ ಸಹಜವಾಗಿ ಈ ದೋಷಕ್ಕೆ ಪಾತ್ರರಾಗುತ್ತೇವೆ. ಆದರೆ ಅದು ಬಹಳ ಅಪಾಯಕರವಾದುದು. ಜಗತ್ತಿನಲ್ಲಿ ಕಂಡುಬರುವ ಅನುದಾರ ಕುತ್ಸಿತ ಬುದ್ಧಿಗೆ ಕೆಲವು ಮಟ್ಟಿಗೆ ಈ ದೋಷವೇ ಕಾರಣವಾಗಿ ರುತ್ತದೆ. ನಾನು ಹೊಸದಾಗಿ ಅಮೇರಿಕೆಯ ಈ ಚಿಕ್ಯಾಗೋ ಪಟ್ಟಣದ ಪ್ರದರ್ಶನದಲ್ಲಿ ಹಾಯ್ದು ಹೋಗುತ್ತಿರುವಾಗ ಒಬ್ಬ ಮನುಷ್ಯನು ಹಿಂದಿ ನಿಂದ ನನ್ನ ರುಮಾಲನ್ನು ಎಳೆದನು. ನಾನು ಹಿಂದೆ ತಿರುಗಿ ನೋಡಲಾಗಿ ಅವನು ಶುಭ್ರ ವಸ್ತ್ರಗಳನ್ನು ಅಚ್ಚುಕಟ್ಟಾಗಿ ಧರಿಸಿದ ಒಬ್ಬ ಅತಿಶಯ ಸಭ್ಯ ಗೃಹಸ್ಥನಂತೆ ಕಂಡನು. ಅವನನ್ನು ನಾನು ವಿಚಾರಿಸಿದೆ. ನನಗೆ ಇಂಗ್ಲಿಷು ಗೊತ್ತಿದೆಯೆಂದು ತಿಳಿದ ಕೂಡಲೇ ಅವನು ಬಲು ನಾಚಿ ಕೊಂಡನು. ಇನ್ನೊಮ್ಮೆ ಆದೇ ಪ್ರದರ್ಶನದಲ್ಲಿ ಮತ್ತೊಬ್ಬ ಮನುಷ್ಯನು ನನ್ನನ್ನು ನೂಕಿದನು. ನಾನು ಕಾರಣವನ್ನು ಕೇಳಲಾಗಿ ಅವನೂ ನಾಚಿ ಕೊಂಡು ಕ್ಷಮಾಪಣೆಯನ್ನು ಕೇಳುತ್ತ 'ನೀವು ಹೀಗೇಕೆ ಉಡುಪನ್ನು ಧರಿಸಿರುವಿರಿ?' ಎಂದು ಕೇಳಿದನು. ಇವರು ತಮ್ಮ ಭಾಷೆ ತಮ್ಮ ವೇಷ ಗಳ ವಿಷಯದಲ್ಲಿ ಮಾತ್ರ ಸಹಾನುಭೂತಿಯುಳ್ಳವರು. ಬಲಿಷ್ಠ ರಾಷ್ಟ್ರ ಗಳು ದುರ್ಬಲ ರಾಷ್ಟ್ರಗಳನ್ನು ಪೀಡಿಸಲಿಕ್ಕೆ ಇಂಥ ಮನೋದೋಷವೇ ಮುಖ್ಯ ಕಾರಣ. ಇದು ನೆರೆಹೊರೆಯವರ ವಿಷಯದಲ್ಲಿಯ ಬಂಧು ಭಾವದ ಸೆಲೆಯನ್ನೇ ಬತ್ತಿಸುತ್ತದೆ. ತನ್ನಂತೆ ನಾನೇಕೆ ಉಡುಪನ್ನು ಧರಿಸಿಲ್ಲೆಂದು ಕೇಳಿ ನನ್ನ ವಿಲಕ್ಷಣ ವೇಷಕ್ಕಾಗಿ ನನ್ನ ಬಗೆಗೆ ತಿರಸ್ಕಾರ ಬುದ್ಧಿಯಿಂದ ವರ್ತಿಸಿದ ಆ ಮನುಷ್ಯನು ಬಹಳ ಸಜ್ಜನನೂ ಶ್ರೇಷ್ಠ ತಂದೆಯೂ ಉತ್ಕೃಷ್ಟ ಪಟ್ಟಣಿಗನೂ ಇರಬಹುದು. ಆದರೆ ಅವನ ದಯಾಳು ಸುಸ್ವಭಾವವು ಪರಕೀಯ ವೇಷದಲ್ಲಿದ್ದ ಮನುಷ್ಯನನ್ನು ಕಂಡು ರೂಪಾಂತರಹೊಂದಿತು. ಎಲ್ಲ ದೇಶಗಳಲ್ಲಿಯೂ ಪರದೇಶದವರನ್ನು ಹೀಗೆ ಪೀಡಿಸುವುದುಂಟು. ಹೀಗೆ ತಾವು ಕಂಡ ಜನರನ್ನು ಕುರಿತು ತಪ್ಪು ಕಲ್ಪನೆಯನ್ನು ಮಾಡಿಕೊಂಡು ಅವರು ತಮ್ಮ ದೇಶಕ್ಕೆ ಹೋಗಿ ಅದನ್ನೇ ಹರಡುತ್ತಾರೆ. ಅಂಬಿಗರೂ ಸೈನಿಕರೂ ವ್ಯಾಪಾರಸ್ಥರೂ ಪರದೇಶಗಳಲ್ಲಿ ಹೋಗಿ ತಮ್ಮ ದೇಶದಲ್ಲಿ ಎಂದೆಂದಿಗೂ ವರ್ತಿಸದಂಥ ವಿಲಕ್ಷಣ ರೀತಿಯಲ್ಲಿ ವರ್ತಿಸುತ್ತಾರೆ. ಚೀನದ ಜನರು ಯುರೋಪಿನವರನ್ನೂ ಅಮೇರಿಕ

ದವರನ್ನೂ ‘ಹೊರಗಿನ ದೆವ್ವ’ಗಳೆಂದು ಕರೆಯುಲು ಇದೇ ಕಾರಣವಿರ ಬಹುದು. ಪಾಶ್ಚಿಮಾತ್ಯ ಜೀವನದ ಉತ್ತಮಾಂಶಗಳನ್ನು ಅವರು ಕಂಡಿದ್ದರೆ ಹೀಗೆಂದೂ ಮಾಡುತ್ತಿದ್ದಿಲ್ಲ.

ನಾವು ಯಾವಾಗಲೂ ಪರರ ಕರ್ತವ್ಯವನ್ನು ಅವರ ದೃಷ್ಟಿಯಿಂದಲೇ ನಿರ್ಣಯಿಸತಕ್ಕದ್ದು. ಅನ್ಯ ಜನಾಂಗಗಳ ನಡತೆ ನಡಾವಳಿಗಳನ್ನೂ ರೀತಿ ನೀತಿಗಳನ್ನೂ ನಮ್ಮ ದೃಷ್ಟಿಯಿಂದ ಎಂದೂ ಪರೀಕ್ಷಿಸಬಾರದೆಂಬ ಮಹತ್ವದ ಮಾತನ್ನು ಅವಶ್ಯವಾಗಿ ನೆನಪಿನಲ್ಲಿಡಬೇಕು. ಪ್ರಪಂಚವೆಲ್ಲ ನನ್ನಂತೆಯೇ ನಡೆದುಕೊಳ್ಳಬೇಕೆಂಬ ನಿಯಮವಿಲ್ಲ. ಜಗತ್ತಿನ ನಿಯಮದಂತೆ ನಾನು ವರ್ತಿಸಬೇಕೇ ಹೊರತು ನನ್ನ ಇಚ್ಛೆಯಂತೆ ಜಗತ್ತು ನಡೆಯುವುದಿಲ್ಲ. ಅಕ್ಕಪಕ್ಕದ ಪರಿಸ್ಥಿತಿಯ ಪ್ರಕಾರ ನಮ್ಮ ಕರ್ತವ್ಯಗಳು ಬೇರೆ ಬೇರೆಯಾಗುವವು. ಆ ಆ ಕಾಲಕ್ಕೆ ನಮ್ಮ ಕರ್ತವ್ಯವಾಗಿ ಒದಗಿ ಬಂದುದನ್ನು ಮಾಡುತ್ತಿರುವುದೇ ಶ್ರೇಯಸ್ಕರವಾದ ಮಾರ್ಗ. ಜನ್ಮತಃ ನಮಗೆ ಪ್ರಾಪ್ತವಾದ ಕರ್ತವ್ಯವನ್ನು ಮೊದಲುಮಾಡಿ, ಆ ಮೇಲೆ ಸಮಾಜದೊಳಗಿನ ನಮ್ಮ ಸ್ಥಿತಿಗತಿ ಸ್ಥಾನಮಾನಗಳಿಗನುಸರಿಸಿ ಪ್ರಾಪ್ತವಾದ ಕರ್ತವ್ಯಗಳನ್ನು ಪಾಲಿಸಬೇಕು. ಆದರೆ ಮನುಷ್ಯಪ್ರಾಣಿಯ ಸ್ವಭಾವದಲ್ಲಿ ಕಂಡುಬರುವ ಒಂದು ದೊಡ್ಡ ದೋಷವೆಂದರೆ, ಅವನು ಆತ್ಮಪರೀಕ್ಷೆಯನ್ನು ಚನ್ನಾಗಿ ಮಾಡಿಕೊಳ್ಳದಿರುವುದು. ಅರಸನಾಗಿ ಸಿಂಹಾಸನವನ್ನಲಂಕರಿಸುವ ಯೋಗ್ಯತೆಯೂ ತನಗಿರುವುದೆಂದು ಮನುಷ್ಯನು ತಿಳಿದುಕೊಳ್ಳುತ್ತಾನೆ. ಅಂಥ ಯೋಗ್ಯತೆ ಅವನಲ್ಲಿದ್ದರೂ ಮೊದಲು ತನ್ನ ಸ್ಥಿತಿಗತಿಗನುಸರಿಸಿ ಪ್ರಾಪ್ತವಾದ ಕರ್ತವ್ಯವನ್ನು ಪಾಲಿಸಿ ತೋರಿಸಬೇಕು. ಆ ಮೇಲೆ ಹೆಚ್ಚಿನ ಕರ್ತವ್ಯಗಳು ತಾವಾಗಿಯೇ ಬಂದೊದಗುವವು. ಜಗತ್ತಿನಲ್ಲಿ ನಾನು ಮನಃಪೂರ್ವಕವಾಗಿ ಕಾರ್ಯಮಾಡಲು ತೊಡಗಿದಾಗ ಸೃಷ್ಟಿದೇವತೆ ನಮ್ಮನ್ನು ಅತ್ತಬಡೆದು ಇತ್ತಬಡೆದು ನಮ್ಮ ನಿಜಸ್ಥಿತಿಯನ್ನರಿತುಕೊಳ್ಳಲು ಅನುಕೂಲತೆಯನ್ನು ಒದಗಿಸಿಕೊಡುವಳು. ಯೋಗ್ಯತೆಯಿಲ್ಲದಂಥ ಸ್ಥಾನದಲ್ಲಿ ಮನುಷ್ಯನು ಬಹಳ ಕಾಲ ನಿಂತು ಸಮಾಧಾನವನ್ನು ಹೊಂದಲಾರನು. ಸೃಷ್ಟಿಯ ಈ ಸರಿಪಡಿಸುವ ಕ್ರಮವನ್ನು ಅಲ್ಲಗಳೆದು ನಡೆಯುವಂತಿಲ್ಲ. ಆದ್ದರಿಂದಲೇ ಕೀಳು ಕೆಲಸವನ್ನು ಮಾಡುವವನು ಕೀಳು ಮನುಷ್ಯನಲ್ಲ. ಮನುಷ್ಯನು ಮಾಡುವ ಕಾರ್ಯಗಳಿಂದಲೇ ಅವನ ಯೋಗ್ಯತೆಯ

ಯನ್ನು ಕಟ್ಟಬಾರದು. ಆ ಕರ್ಮಗಳನ್ನು ಅವನು ಯಾವ ರೀತಿಯಲ್ಲಿ, ಯಾವ ಬುದ್ಧಿಯಿಂದ ಮಾಡುತ್ತಾನೆಂಬುದನ್ನು ನೋಡಿ ನಿರ್ಣಯಿಸಬೇಕು.

ಮುಂದೆ ಕ್ರಮೇಣ ಕರ್ತವ್ಯದ ಈ ಕಲ್ಪನೆಯು ಕೂಡ ರೂಪಾಂತರ ವನ್ನು ಹೊಂದುತ್ತದೆ. ಯಾವ ತರದ ಸ್ವಾರ್ಥಹೇತುವೂ ಇಲ್ಲದೆ ಮಾಡಿದ ಕರ್ಮವೇ ಶ್ರೇಷ್ಠವಾದದ್ದೆಂದು ಕಂಡುಬರುವುದು. ಕರ್ತವ್ಯಕ್ಕಾಗಿ ಕರ್ತವ್ಯ ವನ್ನು ಮಾಡುವುದರಿಂದಲೇ, ಮುಂದಿನ ಹೆಜ್ಜೆಯಾದ ಕರ್ತವ್ಯದ ಕಲ್ಪ ನೆಯು ಕೂಡ ಇಲ್ಲದಂತೆ ಕರ್ಮಮಾಡುವ ಸ್ಥಿತಿಯು ಒದಗುವುದು. ಆಗ 'ತತ್ಪೂಜಾ ಕರ್ಮ ಚಾಖಿಲಂ' ಎಂಬಂತೆ ಎಲ್ಲ ಕರ್ಮವು ದೇವಪೂಜೆಯಾಗಿ ಪರಿಣಮಿಸುವುದು. ಕರ್ಮವು ಏನೂ ಉದ್ದೇಶವಿಲ್ಲದೆ, ಸುಮ್ಮನೆ ನಿರ್ಹೇ ತುಕವಾಗಿ ಮಾಡಲ್ಪಡುವುದು. ಕರ್ತವ್ಯವನ್ನು ಅದೊಂದು ನೀತಿಯೆಂದಾ ಗಲಿ ಅದೊಂದು ಪ್ರೇಮ ಕಾರ್ಯವೆಂದಾಗಲಿ, ಹೇಗೆ ಮಾಡಿದರೂ, ಅದರ ಉದ್ದೇಶವು ಉಳಿದ ಯೋಗಗಳಲ್ಲಿಯಂತೆ ಕೀಳು ಸ್ಥಿತಿಯಲ್ಲಿದ್ದ ಆತ್ಮನನ್ನು ಉದ್ಧರಿಸಿ ಸ್ವಯಂ ಪ್ರಕಾಶಮಾನವಾದ ಉಚ್ಚನೀಚಸ್ಥಿತಿಗೊಯ್ದು ಮುಟ್ಟಿ ಸುವುದೇ ಆಗಿದೆ. ಕ್ಷುದ್ರ ಜೀವನಕ್ರಮದಲ್ಲಿ ಶಕ್ತಿಯ ಹ್ರಾಸ ಮಾಡುವು ದನ್ನು ಬಿಟ್ಟು ಶ್ರೇಷ್ಠ ಭೂಮಿಕೆಯಲ್ಲಿ ಆತ್ಮಪ್ರಕಾಶವಾಗುವುದೇ ಮುಖ್ಯ ಉದ್ದೇಶ. ಕರ್ತವ್ಯವನ್ನು ಮಾಡುತ್ತಿರುವಾಗ ಯಾವಾಗಲೂ ಕೀಳು ವಾಸನೆ ಗಳನ್ನು ಅಲ್ಲಗಳೆಯುತ್ತಿರಬೇಕಾಗುವುದರಿಂದಲೇ ಈ ಕಾರ್ಯವು ಕೈಗೂಡು ವುದು. ಹೀಗೆ ಇಡೀ ಪ್ರಪಂಚವೇ ಕರ್ಮಮಾರ್ಗದಲ್ಲಿಯೂ ಅನುಭವ ಮಾರ್ಗದಲ್ಲಿಯೂ ತಿಳಿದು ಅಥವಾ ತಿಳಿಯದೆ ಹೆಜ್ಜೆಯನ್ನಿಕ್ಕಿ, ಸ್ವಾರ್ಥ ವನ್ನು ಕಡಿದು ಹಾಕುತ್ತ ನಿಜವಾದ ಆತ್ಮಸ್ವರೂಪವನ್ನು ಕಂಡುಕೊಳ್ಳಲು ಮಾರ್ಗವನ್ನು ಹುಡುಕಿಕೊಳ್ಳುವುದು.

ಕರ್ತವ್ಯವೆಂದರೆ ಸವಿಯಾದ ಹಣ್ಣಲ್ಲ. ಅದನ್ನು ಪ್ರೇಮಪೂರ್ವಕ ವಾಗಿ ಜರುಗಿಸಿದರೆ ಯಾವ ಬಾಧೆಯೂ ಇಲ್ಲ. ಇಲ್ಲದಿದ್ದರೆ ಸತತವಾದ ತಿಕ್ಕಾಟವು ಕಟ್ಟಿಟ್ಟ ಮಾತು. ಪ್ರೇಮವಿರದಿದ್ದರೆ ತಾಯಿತಂದೆಗಳು ತಮ್ಮ ಮಕ್ಕಳ ವಿಷಯಕ ಕರ್ತವ್ಯವನ್ನೂ ಗಂಡನು ಹೆಂಡತಿಯ ವಿಷಯಕ ಕರ್ತವ್ಯವನ್ನೂ ಜರುಗಿಸುವುದೆಂತು? ಪ್ರೇಮವಿಲ್ಲದಲ್ಲಿ ದಿನವೂ ಬಡಿದಾಟ ತಿಕ್ಕಾಟಗಳನ್ನು ನಾವು ಪ್ರತ್ಯಕ್ಷ ಕಾಣುವುದಿಲ್ಲವೇ? ಪ್ರೇಮದಿಂದೊಡ ಗೂಡಿದ ಕರ್ತವ್ಯವು ಮಾತ್ರ ಸವಿಯಾದುದು. ಪ್ರೇಮವಾದರೂ ಸ್ವಾತಂತ್ರ್ಯ

ದಲ್ಲಿ ನೆಲೆಗೊಂಡಿದ್ದರೆ ಮಾತ್ರ ಆನಂದವನ್ನು ಸೂಸಬಲ್ಲದು. ಇಂದ್ರಿಯ ಗಳಿಗೂ, ಕಾಮಕ್ರೋಧಾದಿಗಳಿಗೂ, ಪ್ರತಿನಿತ್ಯ ವ್ಯವಹಾರದಲ್ಲೊದಗುವ ನೂರಾರು ಕ್ಷುದ್ರ ಸಂಗತಿಗಳಿಗೂ, ದಾಸರಾಗುವುದು ಸ್ವಾತಂತ್ರ್ಯವಾಗ ಬಹುದೇ ? ಇಂಥ ನೂರಾರು ಕ್ಷುದ್ರ ಸಂಗತಿಗಳೊದಗಿದಾಗ ಸಹನಮಾಡಿ ಕೊಳ್ಳುವುದರಿಂದಲೇ ಉಚ್ಚ ತರದ ಸ್ವಾತಂತ್ರ್ಯವನ್ನು ತೋರಿಸಿದಂತಾ ಗುತ್ತದೆ. ಹೆಂಗುಸರು ತಮ್ಮ ಸಿಡುಕುಸ್ವಭಾವಕ್ಕೂ ಮತ್ಸರಬುದ್ಧಿಗೂ ದಾಸರಾಗಿ ತಮ್ಮ ಗಂಡಂದಿರನ್ನೇ ದೂಷಿಸಲು ತೊಡಗುತ್ತಾರೆ. ಹೀಗೆ ಮಾಡುವುದರಿಂದ ತಮ್ಮ ಸ್ವಾತಂತ್ರ್ಯವನ್ನು ಪ್ರಸ್ಥಾಪಿಸಿದಂತಾಯಿತೆಂದು ತಿಳಿಯುತ್ತಾರೆ. ಆದರಿಂದ ತಮ್ಮ ದಾಸ್ಯವನ್ನೇ ಪ್ರಸ್ಥಾಪಿಸಿದಂತಾಯಿ ತೆಂಬುದನ್ನು ಅವರು ತಿಳಿದುಕೊಳ್ಳುವುದಿಲ್ಲ. ತನ್ನ ಹೆಂಡತಿಯಲ್ಲಿ ಯಾವಾಗಲೂ ದೋಷವನ್ನು ಹುಡುಕುವ ಗಂಡನಿಗೂ ಇವೇ ಮಾತು ಅನ್ವಯಿಸುತ್ತವೆ.

ಪುರುಷರಿಗಾಗಲಿ ಸ್ತ್ರೀಯರಿಗಾಗಲಿ ಇಂದ್ರಿಯಶುದ್ಧಿಯು ಅವಶ್ಯ ವಾದ ಗುಣ. ಪುರುಷನು ಎಷ್ಟೇ ಹಾದಿತಪ್ಪಿ ಹೋಗಿದ್ದರೂ, ಅವನ ಹೆಂಡತಿ ನಮ್ರಳೂ ಸಭ್ಯಳೂ ಪ್ರೇಮಮಯಳೂ ಪತಿವ್ರತೆಯೂ ಆಗಿದ್ದರೆ ಅವನನ್ನು ಸನ್ಮಾರ್ಗಕ್ಕೆ ಹಚ್ಚದೆ ಬಿಡುವುದಿಲ್ಲ. ಜಗತ್ತು ಇನ್ನೂ ಅಷ್ಟೇನೂ ಕೆಟ್ಟಿರುವುದಿಲ್ಲ. ಜಗತ್ತಿನಲ್ಲೆಲ್ಲ ಪಶುಪ್ರಾಯರಾದ ಕ್ರೂರವೃತ್ತಿಯ ಗಂಡಂದಿರ ವಿಷಯವನ್ನೂ ಪುರುಷರ ಅಶುದ್ಧವರ್ತನೆಯ ವಿಷಯವನ್ನೂ ನಾವು ಆಗಾಗ ಕೇಳುತ್ತೇವೆ. ಆದರೆ ಸ್ತ್ರೀಯರಲ್ಲಾದರೂ ಅಷ್ಟೇ ಪಶು ಪ್ರಾಯರೂ ಕ್ರೂರಸ್ವಭಾವದವರೂ ಅಶುದ್ಧವರ್ತನೆಯವರೂ ಎಷ್ಟು ಮಂದಿ ಇಲ್ಲ ? ಎಲ್ಲ ಸ್ತ್ರೀಯರೂ ತಾವು ಡಂಭದಿಂದ ಹೊಗಳಿಕೊಳ್ಳುವಷ್ಟು ಸಜ್ಜನರೂ ಶುದ್ಧರೂ ಆಗಿದ್ದರೆ, ಜಗತ್ತಿನಲ್ಲಿ ಒಬ್ಬ ಗಂಡುಸೂ ಅಶುದ್ಧನಾಗಿ ಉಳಿಯಲಿಕ್ಕಿಲ್ಲೆಂದು ನನಗೆ ನಂಬಿಗೆಯಿದೆ. ಅಂತರಂಗ ಶುದ್ಧಿಯೂ ಪಾತಿವ್ರತ್ಯವೂ ಜಯಿಸಲಾರದಂಥ ಪಾಶವೀವೃತ್ತಿಯೂ ಲೋಕದಲ್ಲಿ ಒಂದಾಗುವವೆಂದು ನಾನು ನಂಬಲಾರೆ. ಪತಿಯನ್ನುಳಿದು ಇತರ ಪುರುಷರ ನ್ನೆಲ್ಲ ತನ್ನ ಮಕ್ಕಳಂತೆ ಕಾಣುವ, ಎಲ್ಲ ಪುರುಷರ ವಿಷಯದಲ್ಲಿಯೂ ಮಾತೃಭಾವವನ್ನು ತಾಳುವ, ಸುಶೀಲೆಯಾದ ಪತಿವ್ರತೆಯಾದ ಸ್ತ್ರೀಯ ಶುದ್ಧ ಸಾಮರ್ಥ್ಯವೂ ಪ್ರಭಾವವೂ ಅಷ್ಟಿಷ್ಟೆಂದು ಹೇಳಲಾಸಲ್ಲ. ಎಂಥ

ಪಾಶವೀವೃತ್ತಿಯ ಪುರುಷನಾದರೂ ಅವಳೆದುರಿಗೆ ಪವಿತ್ರಾಂತಃಕರಣವುಳ್ಳವನಾಗದೆ ಉಳಿಯಲಾರ. ಹಾಗೆಯೇ, ಪ್ರತಿಯೊಬ್ಬ ಗಂಡುಸು ತನ್ನ ಹೆಂಡತಿಯನ್ನುಳಿದು ಇತರ ಎಲ್ಲ ಸ್ತ್ರೀಯರನ್ನೂ ತನ್ನ ತಾಯಿ, ಮಗಳು ಅಥವಾ ಅಕ್ಕತಂಗಿಯರಂತೆ ತಿಳಿಯಬೇಕು. ಧರ್ಮೋಪದೇಶಕನಾಗಲಿಚ್ಛಿಸುವ ಮನುಷ್ಯನಂತೂ ಎಲ್ಲ ಸ್ತ್ರೀಯರನ್ನೂ ತನ್ನ ತಾಯಿಯಂತೆ ಕಂಡು ಯಾವಾಗಲೂ ಹಾಗೆಯೇ ವರ್ತಿಸುತ್ತಿರಬೇಕು. ಮಾತೃಸ್ಥಾನವೆಂದರೆ ಜಗತ್ತಿನಲ್ಲಿಯೇ ಶ್ರೇಷ್ಠವಾದದ್ದು. ಉಚ್ಚತರದ ಸ್ವಾರ್ಥತ್ಯಾಗದ ಪಾಠವನ್ನು ಕಲಿಯಲಿಕ್ಕೂ ಮೈಗೂಡಿಸಿಕೊಳ್ಳಲಿಕ್ಕೂ ಅದೇ ಉತ್ತಮವಾದ ಸ್ಥಾನ. ತಾಯಿಯ ಪ್ರೇಮಕ್ಕಿಂತ ಹೆಚ್ಚಿನದೆಂದರೆ ಪರಮಾತ್ಮನ ಪ್ರೇಮವೊಂದೇ. ಉಳಿದವೆಲ್ಲ ಕೀಳು ತರದವು. ತಾಯಿ ಮೊದಲು ತನ್ನ ಮಕ್ಕಳ ವಿಚಾರವನ್ನು ಪೂರೈಸಿ ಆ ಮೇಲೆ ಸ್ವಂತದ ಆಲೋಚನೆಯನ್ನು ಮಾಡಬೇಕು. ಹೀಗೆ ಮಾಡದೆ ತಾಯಿತಂದೆಗಳು ಮೊದಲು ತಮ್ಮ ಹಿತವನ್ನೇ ಯಾವಾಗಲೂ ಬಯಸುತ್ತಿದ್ದರೆ ತಾಯಿಮಕ್ಕಳ ಸಂಬಂಧವೂ ತಂದೆಮಕ್ಕಳ ಸಂಬಂಧವೂ ಪಶುಪಕ್ಷಿಗಳಂತೆ ಆಗುವುದು. ಮರಿಪಕ್ಷಿ ತನ್ನ ರೆಕ್ಕೆ ಬಲಿತ ಮೇಲೆ ತಾಯಿತಂದೆಗಳನ್ನು ನೆನೆಯುವುದೇ ಇಲ್ಲ. ತಾಯಿಯೇ ದೇವರೆಂಬ ಭಾವನೆಯಿಂದ ಎಲ್ಲ ಸ್ತ್ರೀಯರನ್ನೂ ಕಾಣುವ ಪುರುಷರೇ ಧನ್ಯರು. ತಂದೆಯೇ ದೇವರೆಂಬ ಭಾವನೆಯಿಂದ ಎಲ್ಲ ಪುರುಷರನ್ನೂ ಕಾಣುವ ಸ್ತ್ರೀಯೇ ಧನ್ಯಳು. ತಾಯಿತಂದೆಗಳೆಂದರೆ ಭೂಲೋಕಕ್ಕೆ ಅವತರಿಸಿದ ದೇವರೆಂದು ತಿಳಿಯುವ ಮಕ್ಕಳೇ ಧನ್ಯರು.

ಎದುರಿಗೆ ಬಂದ ಕರ್ತವ್ಯವನ್ನು ಮಾಡುತ್ತ ಹೆಚ್ಚು ಹೆಚ್ಚು ಸಾಮರ್ಥ್ಯವನ್ನು ಗಳಿಸುತ್ತ ಶ್ರೇಷ್ಠಪದವಿಯ ವರೆಗೆ ಸಾಗಿಹೋಗುವುದೇ ಆತ್ಮೋನ್ನತಿಯ ಮಾರ್ಗ. ಒಬ್ಬ ತರುಣ ಸನ್ಯಾಸಿ ಅರಣ್ಯಕ್ಕೆ ಹೋಗಿ ಜಪತಪಾನುಷ್ಠಾನ ಮತ್ತು ಯೋಗಾಭ್ಯಾಸಗಳಲ್ಲಿ ಬಹುಕಾಲವನ್ನು ಕಳೆದನು. ಅನೇಕ ವರ್ಷ ಸಾಧನೆಗೈದು ಕಷ್ಟಪಟ್ಟ ಮೇಲೆ ಒಂದು ದಿನ ಅವನು ಒಂದು ಮರದ ಕೆಳಗೆ ಕುಳಿತಾಗ ಕೆಲವು ತರಗೆಲೆಗಳು ಅವನ ತಲೆಯ ಮೇಲೆ ಉದುರಿ ಬಿದ್ದವು. ಮೇಲೆ ನೋಡಲಾಗಿ ಒಂದು ಕಾಗೆಯೂ ಒಂದು ಬೆಳ್ಳಕ್ಕಿಯೂ ಮರದ ತುದಿಯಲ್ಲಿ ಬಡೆದಾಡುತ್ತಿರುವುದನ್ನು ಅವನು ಕಂಡನು. ಆಗ ಅವನಿಗೆ ಬಹಳ ಸಿಟ್ಟು ಬಂತು. 'ಏನಿದು! ಈ ತರಗೆಲೆ

ಗಳನ್ನು ನನ್ನ ತಲೆಯ ಮೇಲೆ ಒಗೆಯುವ ಧೈರ್ಯಸಾಹಸವನ್ನು ಮಾಡಿ ದಿರಾ ? ' ಎಂದು ಸಿಟ್ಟಿನಿಂದ ಆರ್ಭಟಿಸಿ ಆ ಸನ್ಯಾಸಿ ಉರಿಗಣ್ಣಿನಿಂದ ಆ ಪಕ್ಷಿಗಳ ಕಡೆಗೆ ನೋಡಲಾಗಿ ಅವನ ಕಣ್ಣಿನಿಂದ ಕೋಪಾಗ್ನಿ ಹೊರಸೂಸಿ ಅವುಗಳನ್ನು ಸುಟ್ಟು ಭಸ್ಮಮಾಡಿತು. ಕೇವಲ ಒಂದು ನೋಟದಿಂದಲೇ ಪಕ್ಷಿದ್ವಯವನ್ನು ಸುಟ್ಟು ಬೂದಿ ಮಾಡುವಷ್ಟು ಅದ್ಭುತ ಸಾಮರ್ಥ್ಯ ಬೆಳೆದದ್ದನ್ನು ಕಂಡು ಸನ್ಯಾಸಿಗೆ ಹಿಡಿಸಲಾರದಷ್ಟು ಆನಂದವಾಯಿತು. ಕೆಲಕಾಲದ ಮೇಲೆ ಆಹಾರಭಿಕ್ಷೆಗಾಗಿ ನೆರೆಯಲ್ಲಿಯ ಪಟ್ಟಣಕ್ಕೆ ಆತನು ಹೋಗಬೇಕಾಯಿತು. ಹೋಗಿ ಒಬ್ಬರ ಬಾಗಿಲಲ್ಲಿ ನಿಂತು ' ಅಮ್ಮಾ, ಭಿಕ್ಷಾನ್ನವನ್ನು ನೀಡಿರಿ ' ಎಂದು ಕೂಗಿದನು. ' ಅಪ್ಪಾ ! ಸ್ವಲ್ಪ ತಾಳು ' ಎಂದು ಮನೆಯೊಳಗಿಂದ ದನಿಯು ಕೇಳಬಂತು. ' ದುಷ್ಟ ಹೆಂಗುಸೇ, ನನ್ನನ್ನು ಕಾಯಲು ಹಚ್ಚುವ ಎದೆಗಾರ್ತಿ ನೀನಾರು? ನೀನಿನ್ನೂ ನನ್ನ ಸಾಮರ್ಥ್ಯವನ್ನು ಅರಿತಿಲ್ಲ' ಎಂದು ಅವನು ಮನಸ್ಸಿನಲ್ಲಿ ಆಲೋಚಿ ಸಿದನು. ಹೀಗೆ ಆಲೋಚಿಸುತ್ತಿರುವಾಗ ' ಮಗನೇ, ನಿನ್ನ ದೊಡ್ಡತನ ವನ್ನು ಅತಿಯಾಗಿ ಹೊಗಳಿಕೊಳ್ಳಬೇಡ. ಅಷ್ಟು ದುರಭಿಮಾನಬೇಡ. ಇಲ್ಲಿ ಕಾಗೆಯೂ ಇಲ್ಲ ಬೆಳ್ಳಕ್ಕಿಯೂ ಇಲ್ಲ ' ಎಂದು ಪುನಃ ಒಳಗಿನಿಂದ ಕೂಗು ಬಂತು. ಅವನಿಗೆ ಆಶ್ಚರ್ಯವಾದುದರಿಂದ ಕಾಯುತ್ತ ನಿಂತನು. ಕಡೆಗೆ ಆ ಹೆಂಗಸು ಹೊರಗೆ ಬಂದಳು. ಸನ್ಯಾಸಿ ಅವಳ ಪಾದಕ್ಕೆರಗಿ ' ಅಮ್ಮಾ, ಇದು ನಿನಗೆ ಹೇಗೆ ತಿಳಿಯಿತು ? ' ಎಂದು ಕೇಳಿದ. ಆಗ ಆ ಪತಿವ್ರತಾಶಿರೋಮಣಿ ಹೇಳಿದಳು— ' ಮಗು, ನಿನ್ನ ಯೋಗಸಾಧನೆಯೂ ಅನುಷ್ಠಾನವೂ ನನಗೆ ಗೊತ್ತಿಲ್ಲ. ನಾನು ನಿತ್ಯ ವ್ಯವಹಾರದಲ್ಲಿ ತೊಡಗಿ ರುವ ಒಬ್ಬ ಸಾಮಾನ್ಯ ಹೆಂಗುಸು. ನನ್ನ ಪತಿ ಬೇನೆಬಿದ್ದಿರುವುದರಿಂದ ಅವನನ್ನು ಉಪಚರಿಸತೊಡಗಿದ್ದೆನು. ಆದ್ದರಿಂದ ನೀನು ಕೊಂಚ ಕಾಲ ಕಾಯಬೇಕಾಯಿತು. ನಾನು ಆಯುಷ್ಯದಲ್ಲೆಲ್ಲ ನನ್ನ ಕರ್ತವ್ಯವನ್ನು ಮಾಡಲು ಹೋರಾಡಿರುವೆನು. ನಾನು ಇನ್ನೂ ಕುಮಾರಿಯಾಗಿದ್ದಾಗ ತಾಯಿತಂದೆಗಳ ಸೇವೆಯನ್ನು ಚನ್ನಾಗಿ ಮಾಡಿದೆನು. ಈಗ ವಿವಾಹಿತ ಳಾಗಿದ್ದುದರಿಂದ ಪತಿಯ ಸೇವೆಯನ್ನು ಮಾಡುತ್ತಿರುವೆನು. ನಾನು ಸಾಧನೆಗೈದ ಯೋಗವೆಂದರೆ ಇದಿಷ್ಟೇ. ಆದರೆ ನಾನು ಕರ್ತವ್ಯವನ್ನು ಚನ್ನಾಗಿ ಪಾಲಿಸಿದ್ದರಿಂದ ನನಗೆ ಆತ್ಮಜ್ಞಾನವಾಗಿದೆ. ಆದ್ದರಿಂದ ನೀನು

ಅರಣ್ಯದಲ್ಲಿ ಆಚರಿಸಿದ ಸಂಗತಿಗಳನ್ನೂ ನಿನ್ನ ಮನಸ್ಸಿನಲ್ಲಿ ಮೂಡಿದ ಯೋಜನೆಗಳನ್ನೂ ತಿಳಿದುಕೊಳ್ಳಬಲ್ಲೆನು. ಇದಕ್ಕಿಂತ ಹೆಚ್ಚಿನ ಜ್ಞಾನವೇನಾದರೂ ನಿನಗೆ ಬೇಕಾಗಿದ್ದರೆ ಪಟ್ಟಣದ ಪೇಟೆಯಲ್ಲಿ ವಾಸಿಸುತ್ತಿರುವ ವ್ಯಾಧನನ್ನು ಕಂಡು ವಿಚಾರಿಸು. ನೀನು ಕಲಿಯಬಹುದಾದ ಕೆಲವು ಸಂಗತಿಗಳನ್ನು ಅವನು ನಿನಗೆ ಅತ್ಯಾನಂದದಿಂದ ತಿಳಿಸಿಕೊಡುವನು.' ಸನ್ಯಾಸಿಯು 'ಪಟ್ಟಣಕ್ಕೆ ಏಕೆ ಹೋಗಬೇಕು?' ಎಂದು ಯೋಚಿಸಿದನು. ಆದರೆ ಕಣ್ಣೆದುರಿಗೆ ಸಂಭವಿಸಿದ ಆಶ್ಚರ್ಯಕರವಾದ ಸಂಗತಿಯನ್ನು ನೆನೆದು ಮನಸ್ಸಿನಲ್ಲಿ ಪ್ರಕಾಶವು ಮೂಡಿ ಅವನು ಹೋಗಲುದ್ಯುಕ್ತನಾದನು. ಆ ಪಟ್ಟಣವನ್ನು ಸಮೀಪಿಸಿ ಪೇಟೆಯಲ್ಲಿ ಹೊಕ್ಕು ನೋಡಲಾಗಿ, ದೂರದಲ್ಲಿ ಒಬ್ಬ ದೊಡ್ಡ ಪ್ರಮಾಣದ ಕೊಬ್ಬಿದ ದೇಹದ ವ್ಯಾಧನು ದೊಡ್ಡ ಕತ್ತರಿಯಿಂದ ಮಾಂಸವನ್ನು ಕೊಯ್ಯುತ್ತ, ಬಂದ ಬಂದ ಗಿರಾಕಿಗಳ ಕೂಡ ಕೊಡುಕೊಳ್ಳುವ ವ್ಯವಹಾರದ ಮಾತುಗಳನ್ನಾಡುತ್ತ ಕುಳಿತಿರುವುದನ್ನು ಕಂಡನು. 'ಅಯ್ಯೋ ದೇವಾ, ನಾನೊಲ್ಲೆ! ನನಗೆ ಬುದ್ಧಿಹೇಳುವ ಗೃಹಸ್ಥನು ಇವನೇ? ಇವನು ಮೂರ್ತಿಮಂತ ರಾಕ್ಷಸನಂತೆ ಕಾಣುತ್ತಾನಲ್ಲ!' ಎಂದು ಆ ತರುಣನು ಯೋಚಿಸಿದನು. ಅಷ್ಟರಲ್ಲಿ ಆ ವ್ಯಾಧನು ಮೋರೆಯನ್ನು ಮೇಲಕ್ಕೆತ್ತಿ 'ಸ್ವಾಮೀ, ನಿಮ್ಮನ್ನು ಇಲ್ಲಿ ಆ ಸಾಧ್ವೀಮಣಿ ಕಳುಹಿದಳೇ? ನನ್ನ ಕೆಲಸವನ್ನು ಮುಗಿಸುವತನಕ ಕೊಂಚ ಕಾಲ ವಿಶ್ರಮಿಸಿ; ಆಸನವನ್ನು ತಕ್ಕೊಳ್ಳಿ' ಎಂದು ನುಡಿದನು. ಆ ಸನ್ಯಾಸಿ ಆಶ್ಚರ್ಯ ಚಕಿತನಾಗಿ, ಏನಾಗುವುದೋ ನೋಡೋಣವೆಂದು ಕುತೂಹಲವುಳ್ಳವನಾಗಿ ಕುಳಿತುಕೊಂಡನು. ವ್ಯಾಧನು ತನ್ನ ಕೆಲಸ ಮುಗಿದ ಮೇಲೆ ಹಣವನ್ನು ತೆಗೆದುಕೊಂಡು 'ಬನ್ನಿ ಸ್ವಾಮಿ, ನಮ್ಮ ಮನೆಗೆ ಹೋಗೋಣ' ಎಂದು ಕರೆದನು. ಮನೆಗೆ ಹೋದ ಮೇಲೆ ವ್ಯಾಧನು ಸನ್ಯಾಸಿಗೊಂದು ಆಸನವನ್ನು ಕೊಟ್ಟು ಕುಳ್ಳಿರಹೇಳಿದ. ತಾನು ಮನೆಯೊಳಗೆ ಹೊಕ್ಕು ತನ್ನ ವೃದ್ಧ ಮಾತಾಪಿತೃಗಳಿಗೆ ಸ್ನಾನ ಊಟ ಮಾಡಿಸಿ ಅವರಿಗೆ ಸಂತೋಷವಾಗುವಂತೆ ಎಲ್ಲ ತರದ ಸೇವೆಯನ್ನೂ ಉಪಚಾರವನ್ನೂ ಮಾಡಿ ಹೊರಗೆ ಬಂದು 'ಸ್ವಾಮೀ, ನೀವು ನನ್ನನ್ನು ಕಾಣಲಿಕ್ಕೆ ಬಂದಿರುವಿರಿ. ನಾನು ನಿಮಗಾಗಿ ಏನು ಮಾಡಬೇಕು?' ಎಂದು ಆ ಸನ್ಯಾಸಿಯನ್ನು ಕೇಳಿದನು. ಸನ್ಯಾಸಿಯು ಜೀವ ಈಶ್ವರ ವಿಷಯಕ ಕೆಲವು ಪ್ರಶ್ನೆಗಳನ್ನು

ಕೇಳಿದನು. ವ್ಯಾಧನು ಉತ್ತಮವಾದ ಒಂದು ಉಪನ್ಯಾಸವನ್ನೇ ನಿರೂಪಿಸಿದನು. ಅದೇ ಮಹಾಭಾರತದಲ್ಲಿ ವ್ಯಾಧಗೀತೆಯೆಂದು ಹೆಸರುಗೊಂಡಿದೆ. ಅದು ವೇದಾಂತದ ಪರಮೋಚ್ಚ ವಿಚಾರಗಳನ್ನೊಳಗೊಂಡಿದೆ. ವ್ಯಾಧನು ತನ್ನ ಉಪದೇಶವನ್ನು ಮುಗಿಸಿದ ಮೇಲೆ ಸನ್ಯಾಸಿಗೆ ಆಶ್ಚರ್ಯವಾಯಿತು. ಅವನು 'ನಿಮಗಿಂಥ ದೇಹವು ಯಾಕೆ? ಇಂಥ ದಿವ್ಯಜ್ಞಾನವನ್ನು ಹೊಂದಿಯೂ ಈ ವ್ಯಾಧದೇಹದಲ್ಲಿ ಇಂಥ ಹೊಲಸಾದ ನೀಚ ಕೆಲಸವನ್ನು ಏಕೆ ಮಾಡುತ್ತಿರುವಿರಿ?' ಎಂದು ಕೇಳಿದನು. ಆಗ ವ್ಯಾಧನು 'ಮಗನೇ, ಯಾವ ಕರ್ತವ್ಯವೂ ಹೊಲಸಲ್ಲ, ನೀಚವಲ್ಲ. ಯಾವ ಕರ್ತವ್ಯವೂ ಅಶುದ್ಧವಲ್ಲ. ನನ್ನ ಜನ್ಮವು ಈ ಪರಿಸ್ಥಿತಿಯಲ್ಲಿಯೂ ಇಂಥ ನೆರೆಹೊರೆಯಲ್ಲಿಯೂ ಆಯಿತು. ಚಿಕ್ಕಂದಿನಲ್ಲಿಯೇ ನಾನೀ ಉದ್ಯೋಗವನ್ನು ಕಲಿತೆ. ನಾನು ಅನಾಸಕ್ತನಾಗಿ, ಒದಗಿ ಬಂದ ನನ್ನ ಕರ್ತವ್ಯಗಳನ್ನು ಚನ್ನಾಗಿ ಪಾಲಿಸಲು ಯತ್ನಿಸುತ್ತಿದ್ದೇನೆ. ಗೃಹಸ್ಥಾಶ್ರಮಿಯಾದ ನನ್ನ ಕರ್ತವ್ಯವನ್ನು ನಾನು ಚನ್ನಾಗಿ ಪಾಲಿಸಲು ಯತ್ನಿಸುತ್ತೇನೆ. ನನ್ನ ತಾಯಿ ತಂದೆಗಳನ್ನು ಸುಖಿಯಾಗಿಡಲು ಶಕ್ತಿಮೀರಿ ಪ್ರಯತ್ನಮಾಡುತ್ತೇನೆ. ನಾನು ಸನ್ಯಾಸಿಯೂ ಅಲ್ಲ, ನನಗೆ ಯೋಗವೂ ಗೊತ್ತಿಲ್ಲ; ಅರಣ್ಯವಾಸವನ್ನೂ ನಾನು ಮಾಡಿಲ್ಲ. ಆದರೂ ನನ್ನ ಸ್ಥಿತಿಗತಿಗೆ ಅನುಸರಿಸಿ ಪ್ರಾಪ್ತವಾದ ಎಲ್ಲ ಕರ್ತವ್ಯಗಳನ್ನೂ ಅನಾಸಕ್ತನಾಗಿ ಪಾಲಿಸುತ್ತ ಬಂದಿರುವುದರಿಂದ ನನಗೆ ಈ ಸ್ಥಿತಿಯು ಪ್ರಾಪ್ತವಾಗಿದೆ ಎಂದು ಹೇಳಿದನು.

ಹಿಂದುಸ್ಥಾನದಲ್ಲಿ ಒಬ್ಬ ದೊಡ್ಡ ಯೋಗಿ ಇದ್ದಾನೆ. ನಾನು ಅಂಥ ಆಶ್ಚರ್ಯಕರನಾದ ಮನುಷ್ಯನನ್ನು ನನ್ನ ಆಯುಷ್ಯದಲ್ಲಿಯೇ ಕಂಡಿಲ್ಲ. ಅವನೊಬ್ಬ ವಿಲಕ್ಷಣ ಮನುಷ್ಯ. ಅವನು ಯಾರಿಗೂ ಪ್ರತ್ಯಕ್ಷವಾಗಿ ಉಪದೇಶ ಮಾಡುವವನಲ್ಲ. ನೀವು ಪ್ರಶ್ನೆಯನ್ನು ಕೇಳಿದರೆ ಅವನು ಉತ್ತರವನ್ನೇ ಕೊಡುವುದಿಲ್ಲ. ಗುರುಸ್ಥಾನವನ್ನು ಸ್ವೀಕರಿಸುವುದು ಅವನಿಗೆ ಸಹನವಾಗುವುದಿಲ್ಲ. ಅವನಿಗೊಂದು ಪ್ರಶ್ನೆಯನ್ನು ಕೇಳಿ ಹಾಗೆಯೇ ಕೆಲವು ದಿನ ಕಾದುಕೊಂಡಿದ್ದರೆ, ಮಾತನಾಡುತ್ತ ಕ್ರಮೇಣ ಆ ವಿಷಯವನ್ನೆತ್ತಿ, ಮಹತ್ತಾದ ಜ್ಞಾನಪ್ರಕಾಶವನ್ನು ಹೊರಚೆಲ್ಲುತ್ತಾನೆ. ಅವನೊಮ್ಮೆ ನನಗೆ ಕರ್ಮದ ರಹಸ್ಯವನ್ನು ತಿಳಿಹೇಳಿದನು. ಧ್ಯೇಯವೂ ಸಾಧನವೂ ಒಂದಾಗಿ ಬೆರೆತು ಹೋಗಬೇಕೆಂಬುದೇ ಈ ರಹಸ್ಯ. ನೀನು

ಯಾವುದೊಂದು ಕೆಲಸವನ್ನು ಮಾಡುತ್ತಿರುವಾಗ ಅದರಾಚೆಗಿನ ವಿಷಯ ವನ್ನು ಎಂದೂ ಯೋಚಿಸಬಾರದು. ತತ್ಕಾಲದಲ್ಲಿ ಆ ಕರ್ತವ್ಯವನ್ನು ಈಶ್ವರಪೂಜೆಯೆಂದೂ ಉಚ್ಚತರದ ಪರಾಪೂಜೆಯೆಂದೂ ತಿಳಿದು ನಿನ್ನ ಇಡೀ ಆಯುಷ್ಯ ಶಕ್ತಿ ಉತ್ಸಾಹಗಳನ್ನೆಲ್ಲ ಅದರಲ್ಲಿಯೇ ತೊಡಗಿಸಬೇಕು. ಮಹಾಭಾರತದೊಳಗಿನ ಆ ವ್ಯಾಧನೂ ಆ ಪತಿವ್ರತಾ ಶಿರೋಮಣಿಯೂ ತಮ್ಮ ಕರ್ತವ್ಯಗಳನ್ನು ಹೀಗೆಯೇ ಸಂತೋಷದಿಂದ ಮನಃಪೂರ್ವಕವಾಗಿ ಮಾಡುತ್ತಿದ್ದರು. ಅದರಿಂದ ಅವರಿಗೆ ಆತ್ಮಜ್ಞಾನವುಂಟಾಯಿತು. ಎಂಥ ಸ್ಥಿತಿಗತಿ, ನೆರೆಹೊರೆ ಮತ್ತು ಪರಿಸ್ಥಿತಿಯಲ್ಲಿದ್ದರೂ ಪ್ರಾಪ್ತವಾದ ಕರ್ತವ್ಯ ಗಳನ್ನು ಯೋಗ್ಯ ರೀತಿಯಿಂದ ಪಾಲಿಸಿದರೆ, ಆತ್ಮಜ್ಞಾನನಿಷ್ಠೆಯ ಪರ ಮೋಚ್ಚಪದವಿಯನ್ನು ನಾವು ಹೊಂದುವುದರಲ್ಲಿ ಸಂದೇಹವಿಲ್ಲ.

ಫಲದ ಆಶೆಯನ್ನು ಮನಸ್ಸಿಗೆ ಹಚ್ಚಿಕೊಂಡು ಕರ್ಮಮಾಡುವವನೇ ತನ್ನ ಪಾಲಿಗೆ ಬಂದ ಕರ್ತವ್ಯದಲ್ಲಿ ಹುಳುಕನ್ನು ಎತ್ತಿ ಎಣಿಸುವನು. ಫಲಾಶೆಯನ್ನು ಇಟ್ಟುಕೊಳ್ಳದೆ ಅನಾಸಕ್ತನಾಗಿ ಕರ್ಮವಾಡುವವನಿಗೆ ಎಲ್ಲ ಕರ್ತವ್ಯಗಳೂ ಸಮವಾಗಿ ತೋರುವವು. ಎಲ್ಲ ಕರ್ತವ್ಯಗಳು ಸ್ವಾರ್ಥಬುದ್ಧಿಯನ್ನೂ ವಿಷಯವಾಸನೆಯನ್ನೂ ಹೊಡೆದೋಡಿಸಿ ಆತ್ಮ ಸ್ವಾತಂತ್ರ್ಯವನ್ನು ದೊರಕಿಸಿಕೊಡಲು ಯೋಗ್ಯ ಸಾಧನಗಳಾಗಿ ಪರಿಣಮಿ ಸುವವು. ತನಗೆ ತಾನೇ ಇಲ್ಲದ ಸಲ್ಲದ ಮಹತ್ವವನ್ನು ಕೊಟ್ಟು ಅತಿ ದುರಭಿಮಾನವನ್ನು ತಾಳುವ ಸಂದರ್ಭವು ಬಹಳ. ನಮ್ಮ ಪಾತ್ರತೆಗಿಂತ ಸ್ವಲ್ಪ ಹೆಚ್ಚಿನ ಕರ್ತವ್ಯಗಳನ್ನೇ ದೇವರು ನಮಗೆ ದಯಪಾಲಿಸುತ್ತಾನೆ.

ಪ್ರತಿಸ್ಪರ್ಧೆಯಿಂದ ಅಸೂಯೆಯು ಹುಟ್ಟಿ ಅಂತಃಕರಣದ ಕೋಮಲತೆ ಯನ್ನು ಬಾಡಿಸುತ್ತದೆ. ಅಸಂತುಷ್ಟನಿಗೂ ಹುಳುಕು ಹುಡುಕುವವನಿಗೂ ಯಾವ ಕರ್ತವ್ಯಗಳೂ ಒಗ್ಗುವುದಿಲ್ಲ. ಏತರಿಂದಲೂ ಅವನಿಗೆ ಸಮಾಧಾನ ವಾಗುವುದಿಲ್ಲ. ಹೀಗೆ ಅವನ ಇಡಿಯ ಆಯುಷ್ಯವೇ ವ್ಯರ್ಥವಾಗಿ ಹಾಳಾಗಿ ಹೋಗುವುದು. ನಮ್ಮ ಎದುರಿನಲ್ಲಿ ತಾನಾಗಿಯೇ ಸಿದ್ಧವಾಗಿ ಪ್ರಾಪ್ತವಾದ ಕರ್ತವ್ಯಗಳನ್ನು ಮಾಡುತ್ತ, ಕರ್ತವ್ಯರಥದ ಗಾಲಿಗಳಿಗೆ ಯಾವಾಗಲೂ ಹೆಗಲು ಹಚ್ಚಲಿಕ್ಕೆ ಸಿದ್ಧರಿರುತ್ತ, ಮುಂದೆ ಮುಂದಕ್ಕೆ ಸಾಗೋಣ. ಎಂದರೆ ನಿಜವಾಗಿಯೂ ನಾವು ಆತ್ಮಪ್ರಕಾಶವನ್ನು ಕಾಣಬಲ್ಲೆವು.

# ಕರ್ಮವು ಲೋಕೋದ್ಧಾರಕ್ಕಲ್ಲ, ಆತ್ಮೋದ್ಧಾರಕ್ಕೆ

ಕರ್ತವ್ಯನಿಷ್ಠರಾಗುವುದರಿಂದ ನಾವು ಆಧ್ಯಾತ್ಮಿಕ ಉನ್ನತಿಯನ್ನು ಹೊಂದಲು ಹೇಗೆ ಅನುಕೂಲವಾಗುವುದೆಂಬುದನ್ನು ಯೋಚಿಸುವ ಮೊದಲು, ಕರ್ಮದ ಬೇರೊಂದು ಅರ್ಥವನ್ನು ಸಂಕ್ಷೇಪವಾಗಿ ವಿವರಿಸುವುದು ಅವಶ್ಯ. ಪ್ರತಿಯೊಂದು ಧರ್ಮಮಾರ್ಗವೂ ತತ್ವಜ್ಞಾನಕಾಂಡ, ಪುರಾಣಕಾಂಡ, ಕರ್ಮಕಾಂಡವೆಂಬ ಮೂರು ಭಾಗಗಳನ್ನು ಒಳಗೊಂಡಿದೆ. ತತ್ವಜ್ಞಾನದ ಭಾಗವೇ ಪ್ರತಿಯೊಂದು ಧರ್ಮದ ಜೀವಾಳ. ಪುರಾಣ ಭಾಗವು ಈ ತತ್ವಗಳನ್ನೇ ಮಹಾಪುರುಷರ ಚರಿತ್ರೆಗಳಿಂದಲೂ ಕಾಲ್ಪನಿಕ ಕಥೆಗಳಿಂದಲೂ ಆಶ್ಚರ್ಯಕರವಾದ ದಂತಕಥೆಗಳಿಂದಲೂ ಉದಾಹರಿಸಿ ಹೇಳುತ್ತದೆ. ಕರ್ಮಕಾಂಡವು ಇವೇ ತತ್ವವಿಚಾರಗಳಿಗೆ ಇದಕ್ಕೂ ಹೆಚ್ಚಿನ ಮೂರ್ತಸ್ವರೂಪವನ್ನು ಕೊಟ್ಟು ಪ್ರತಿಯೊಬ್ಬನೂ ಸುಲಭವಾಗಿ ತಿಳಿದುಕೊಳ್ಳುವಂತೆ ಸ್ಪಷ್ಟೀಕರಿಸುತ್ತದೆ. ವ್ಯವಹಾರದಲ್ಲಿ, ನಿತ್ಯಾಚರಣೆಯಲ್ಲಿ, ರೂಪುಗೊಂಡ ತತ್ವಜ್ಞಾನವೇ ಕರ್ಮಕಾಂಡವೆಂದು ಹೇಳಬಹುದು. ಈ ಆಚಾರವೇ ಕರ್ಮ. ಪ್ರತಿಯೊಂದು ಧರ್ಮದಲ್ಲಿ ಇದು ಅವಶ್ಯ. ನಮ್ಮಲ್ಲಿ ನೇಕರು ಸೂಕ್ಷ್ಮ ಆಧ್ಯಾತ್ಮಿಕ ವಿಚಾರಗಳನ್ನು ತಿಳಿದುಕೊಳ್ಳುವುದು ಸಾಧ್ಯವಿಲ್ಲ. ತಮಗೆ ಎಲ್ಲವೂ ತಿಳಿಯುವುದೆಂದು ಭಾವಿಸುವುದು ಬಲು ಸುಲಭ. ಆಚರಣೆಯಲ್ಲಿ ಅದನ್ನು ತೋರ್ಪಡಿಸುವ ವೇಳೆ ಬಂದಾಗ ಆ ಸೂಕ್ಷ್ಮ ಅಧ್ಯಾತ್ಮಿಕ ವಿಚಾರಗಳನ್ನು ನಿಜವಾಗಿ ತಿಳಿದುಕೊಳ್ಳುವುದು ಕಠಿಣವಿದೆ ಯೆಂದು ತಿಳಿದುಬರುವುದು. ಆದ್ದರಿಂದ ಮೂರ್ತಿ, ರೂಪ, ಅಥವಾ ಸಾಂಕೇತಿಕ ಚಿನ್ಹಗಳು ವಸ್ತುಜ್ಞಾನವನ್ನು ಮಾಡಿಕೊಡಲಿಕ್ಕೆ ಬಹಳ ಉಪಯುಕ್ತವಾಗಿವೆ, ಅವಶ್ಯವಾಗಿವೆ. ಅನಾದಿ ಕಾಲದಿಂದಲೂ ಪ್ರತಿಯೊಂದು ಧರ್ಮದಲ್ಲಿಯೂ ಈ ಚಿನ್ಹಗಳು ನಡೆದು ಬಂದಿವೆ. ಒಂದು ಅರ್ಥದಿಂದ ನೋಡಿದರೆ, ಚಿನ್ಹಗಳನ್ನು ಬಿಟ್ಟು ಯೋಚಿಸುವುದು ಕೂಡ

ಆವಶ್ಯವಿದೆ. ಮೊದಲು ಶಬ್ದಗಳೇ ವಿಚಾರಗಳ ಚಿನ್ಹಗಳು. ಇಡೀ ಜಗತ್ತೇ ಒಂದು ಚಿನ್ಹ; ದೇವರೇ ಮೂಲಭೂತ ವಸ್ತು. ಈ ತರದ ರೂಪಕವು ಮನುಷ್ಯನ ಸೃಷ್ಟಿಯಲ್ಲ. ಒಂದು ಧರ್ಮಕ್ಕೆ ಸಂಬಂಧಪಟ್ಟ ಕೆಲವೊಂದು ಜನರು ಒಂದೆಡೆಯಲ್ಲಿ ಕಲೆತು ಈ ಚಿನ್ಹಗಳನ್ನೂ ರೂಪಕಗಳನ್ನೂ ತಮ್ಮ ಸ್ವಂತ ಕಲ್ಪನೆಯಿಂದ ಕಲ್ಪಿಸಿ ಅಸ್ತಿತ್ವದಲ್ಲಿ ತರುತ್ತಾರೆಂದು ಇದರ ಅರ್ಥವಲ್ಲ. ಈ ಧಾರ್ಮಿಕ ಚಿನ್ಹಗಳು ಅಥವಾ ರೂಪಕಗಳು ಸೃಷ್ಟಿಕ್ರಮಕ್ಕನುಸರಿಸಿ ಹುಟ್ಟಿ ಬೆಳೆಯುತ್ತವೆ. ಇಲ್ಲದಿದ್ದರೆ ಕೆಲವೊಂದು ವಿಚಾರಗಳಿಗೆ ಕೆಲವೊಂದು ಚಿನ್ಹಗಳೇ ಯೋಗ್ಯವಾದವುಗಳೆಂದು ಪ್ರತಿಯೊಬ್ಬನ ಮನಸ್ಸಿಗೂ ತೋರಲಿಕ್ಕೆ ಕಾರಣವೇನು ? ಕೆಲವು ಸಂಕೇತಗಳು ಅಥವಾ ಚಿನ್ಹಗಳು ಜಗತ್ತಿನಲ್ಲಿ ಎಲ್ಲೆಲ್ಲಿಯೂ ಪ್ರಚಾರದಲ್ಲಿವೆ. ಕತ್ತರಿಯ ಚಿನ್ಹವು ಕ್ರಿಸ್ತಧರ್ಮಕ್ಕೆ ಸಂಬಂಧಿಸಿಯೇ ಮೊದಲಿಗೆ ಜನ್ಮವೆತ್ತಿತೆಂದು ಅನೇಕರ ತಿಳಿವಳಿಕೆ. ಆದರೆ, ಕ್ರಿಸ್ತಧರ್ಮದ ಉದಯಕ್ಕಿಂತ ಮೊದಲೂ, ಮೋಜಿಸನು ಹುಟ್ಟುವುದಕ್ಕಿಂತ ಮೊದಲೂ, ವೇದಗಳು ಪ್ರಕಟವಾಗುವ ಮೊದಲೂ, ಅಷ್ಟೇಕೆ ಮನುಷ್ಯನು ಬರೆದಿಡುವುದಕ್ಕೆ ಆರಂಭಿಸುವ ಮೊದಲೇ ಈ ಕತ್ತರಿಯ ಕಲ್ಪನೆ ಬಳಿಕೆಯಲ್ಲಿತ್ತು. ಅರ್ಜಂಟಿಕ್ ಮತ್ತು ಫೋನಿಸಿ-ಯನ್ ಜನರಲ್ಲಿಯೂ ಈ ಕತ್ತರಿಯ ಕಲ್ಪನೆ ಪ್ರಚಾರಗೊಂಡಿತ್ತು. ಪ್ರತಿಯೊಂದು ಜನಾಂಗಕ್ಕೂ ಕತ್ತರಿಯು ಪರಿಚಿತ ಚಿನ್ಹವಾಗಿತ್ತೆಂದು ಕಾಣುತ್ತದೆ. ಇದಲ್ಲದೆ ಆವತಾರಿಕ ಪುರುಷರನ್ನು ಗಲ್ಲಿಗೇರಿಸಿದ ಚಿನ್ಹವು ಪ್ರತಿಯೊಂದು ರಾಷ್ಟ್ರಕ್ಕೂ ಪರಿಚಿತವಿದ್ದಂತೆ ತೋರುತ್ತದೆ. ವರ್ತುಳವು ಜಗತ್ತಿನಲ್ಲೆಲ್ಲ ಒಂದು ದೊಡ್ಡ ಚಿನ್ಹವಾಗಿದೆ. ಎಲ್ಲಕ್ಕೂ ಹೆಚ್ಚು ವಿಶ್ವವ್ಯಾಪಿಯಾದ ಚಿನ್ಹವೆಂದರೆ ಸ್ವಸ್ತಿಕ. ಬೌದ್ಧರು ಈ ಚಿನ್ಹವನ್ನು ಜಗತ್ತಿನಲ್ಲೆಲ್ಲ ಹರಡಿಸಿದರೆಂದು ಒಮ್ಮೆ ಜನರ ತಿಳಿವಳಿಕೆಯಿತ್ತು. ಆದರೆ ಬೌದ್ಧಧರ್ಮದ ಉದಯಕ್ಕಿಂತ ಎಷ್ಟೋ ಮುಂಚಿತವಾಗಿ ಅನೇಕ ರಾಷ್ಟ್ರಗಳು ಈ ಸ್ವಸ್ತಿಕ ಚಿನ್ಹವನ್ನು ಉಪಯೋಗಿಸುತ್ತಿದ್ದರೆಂದು ಕಂಡುಬಂದಿದೆ. ಪ್ರಾಚೀನ ಬಾಬಿ-ಲೋನಿನಲ್ಲಿಯೂ ಇಜಿಪ್ತ್ ದೇಶದಲ್ಲಿಯೂ ಅದು ಬಳಿಕೆಯಲ್ಲಿತ್ತು. ಇದರ ಅರ್ಥವೇನು ? ಈ ಸಂಕೇತಗಳೆಲ್ಲ ಕೇವಲ ಅಂಧರೂಢಿಯ ಮಾತುಗಳಲ್ಲ. ಅದಕ್ಕೊಂದು ಕಾರ್ಯಕಾರಣಭಾವವಿರಲೇಬೇಕು. ಅವುಗಳಿಗೂ ಮನುಷ್ಯರ ಮನಸ್ಸಿಗೂ ಒಂದು ನೈಸರ್ಗಿಕ ಸಂಬಂಧವಿರಲೇಬೇಕು. ಇದು ಭಾಷೆಯ

ಕೇವಲ ಪರಂಪರಾಗತವಾದ ರೂಢಿಯ ಮಾತಲ್ಲ. ಕೆಲವೊಂದು ವಿಚಾರ ಗಳನ್ನು ಕೆಲವೊಂದು ವಿಶಿಷ್ಟ ಶಬ್ದಗಳಿಂದ ವ್ಯಕ್ತಗೊಳಿಸಬೇಕೆಂದು ಜನರು ಕೂಡಿ ಮಾತಾಡಿಕೊಂಡಿಲ್ಲ. ಅನುರೂಪವಾದ ಶಬ್ದವಿಲ್ಲದಿದ್ದರೆ ವಿಚಾರ ವಿಲ್ಲ; ಅದರಂತೆ ಅನುರೂಪವಾದ ವಿಚಾರವಿಲ್ಲದಿದ್ದರೆ ಶಬ್ದವಿಲ್ಲ. ಶಬ್ದ ವಿಚಾರಗಳೆರಡೂ ಅಗಲದೆ ಜೊತೆಯಾಗಿರತಕ್ಕವೇ. ವಿಚಾರಗಳನ್ನು ವ್ಯಕ್ತ ಗೊಳಿಸುವ ಸಂಕೇತಗಳೆಂದರೆ ಶಬ್ದಗಳಾಗಲಿ ವರ್ಣಗಳಾಗಲಿ ಇರಬಹುದು. ಕಿವುಡರಿಗೂ ಮೂಕರಿಗೂ ಶಾಬ್ದಿಕ ಸಂಕೇತಗಳ ಉಪಯೋಗವಿಲ್ಲ. ಮನಸ್ಸಿನೊಳಗಿನ ಪ್ರತಿಯೊಂದು ವಿಚಾರಕ್ಕೂ ತಕ್ಕ ರೂಪವು ಇರಲೇ ಬೇಕು. ಸಂಸ್ಕೃತದಲ್ಲಿ ಇದಕ್ಕೆ ನಾಮರೂಪವೆಂದೆನ್ನುತ್ತಾರೆ. ಕೇವಲ ರೂಢಿಯಿಂದ ಒಂದು ಭಾಷೆಯನ್ನು ಪ್ರಚಾರದಲ್ಲಿ ತರುವುದು ಹೇಗೆ ಶಕ್ಯ ವಿಲ್ಲವೋ ಹಾಗೆಯೇ ಸಂಕೇತಪದ್ಧತಿಯನ್ನಾದರೂ ರೂಢಿಯಿಂದ ನೆಲೆ ಗೊಳಿಸುವುದು ಅಶಕ್ಯ. ಜಗತ್ತಿನಲ್ಲಿ ಕರ್ಮಕಾಂಡದ ಸಂಕೇತಗಳು ಮನುಷ್ಯ ಪ್ರಾಣಿಯ ಧಾರ್ಮಿಕ ವಿಚಾರಗಳ ವ್ಯಕ್ತಸ್ವರೂಪವೆಂದು ಹೇಳಬಹುದು. ಈ ಆಚಾರ, ಕರ್ಮ, ಗುಡಿಗುಂಡಾರ ಮತ್ತು ಪೂಜೆ ಪುನಸ್ಕಾರಗಳಿಂದ ಪ್ರಯೋಜನವಿಲ್ಲೆಂದು ಹೇಳುವುದು ಬಲು ಸುಲಭ. ಈಗಿನ ಕಾಲದಲ್ಲಿ ಇದೀಗ ಹುಟ್ಟಿದ ಮಗು ಕೂಡ ಹೀಗೆ ಬಡಬಡಿಸತೊಡಗಿದೆ. ಆದರೆ ದೇವಾಲಯಗಳಲ್ಲಿ ಮೂರ್ತಿಗಳನ್ನು ಪೂಜಿಸುವವರ ಸ್ವಭಾವವೂ ಮನೋ ವೃತ್ತಿಯೂ ಹಾಗೆ ಮಾಡದಿದ್ದವರಿಗಿಂತ ಭಿನ್ನವಾಗಿರುತ್ತದೆಂಬುದು ನಿರ್ವಿ ವಾದದ ಮಾತು. ವಿಶಿಷ್ಟ ತರದ ದೇವಾಲಯಗಳು ಮಂತ್ರತಂತ್ರಗಳು ಆಚಾರಪದ್ಧತಿಗಳು ಕೆಲವೊಂದು ವಿಚಾರಗಳ ವ್ಯಕ್ತರೂಪಗಳಾಗಿದ್ದು ಆ ಆ ಧರ್ಮದ ಅನುಯಾಯಿಗಳ ಮನಸ್ಸಿನಲ್ಲಿ ತದನುರೂಪವಾದ ವಿಚಾರ ಗಳನ್ನು ಹುಟ್ಟಿಸುತ್ತವೆ. ಈ ವಿಚಾರಪದ್ಧತಿಯನ್ನೂ ಸಂಕೇತಗಳನ್ನೂ ಅಲ್ಲಗಳೆದು ನಡೆಯುವಂತಿಲ್ಲ. ಇವುಗಳ ಅಧ್ಯಯನ ಮತ್ತು ಆಚರಣೆಯು ಕರ್ಮಯೋಗದ ಸ್ವಾಭಾವಿಕವೂ ಅವಶ್ಯವೂ ಆದ ಅಂಗವಾಗಿದೆ.

ಈ ಕರ್ಮಯೋಗ ಶಾಸ್ತ್ರದಲ್ಲಿ ಇನ್ನೂ ಅನೇಕ ವಿಚಾರಗಳಿವೆ. ವಿಚಾ ರಕ್ಕೂ ಶಬ್ದಕ್ಕೂ ಸಂಬಂಧವೇನು, ಶಬ್ದಸಾಮರ್ಥ್ಯದಿಂದ ಏನೇನನ್ನು ಸಾಧಿಸಬಹುದು ಎಂಬುದನ್ನು ತಿಳಿದುಕೊಳ್ಳುವುದು ಒಂದು ವಿಚಾರ. ಪ್ರತಿಯೊಂದು ಧರ್ಮವೂ ಶಬ್ದದ ಸಾಮರ್ಥ್ಯವನ್ನು ಒಪ್ಪುತ್ತಿದೆ. ಕೆಲವು

ಧರ್ಮಗಳಂತೂ ಶಬ್ದದಿಂದಲೇ ಸೃಷ್ಟಿಯ ಉತ್ಪತ್ತಿಯಾಯಿತೆಂದು ಹೇಳಲು ಹಿಂಜರಿದಿಲ್ಲ. ಈಶ್ವರ ವಿಚಾರದ ಬಹಿರಂಗರೂಪವೆಂದರೆ ಶಬ್ದ. ದೇವರು ಸೃಷ್ಟಿಮಾಡುವುದಕ್ಕಿಂತ ಮುಂಚೆ ಯೋಚಿಸಿದಂತೆಯೂ ಇಚ್ಛಿಸಿದಂತೆಯೂ ಶಬ್ದದಿಂದ ಸೃಷ್ಟಿಯ ನಿರ್ಮಾಣವಾಯಿತು. ನಮ್ಮ ಭೌತಿಕ ಜೀವನಕಲಹದ ಕಿಲಿಬಿಲಿ ಗದ್ದಲದಲ್ಲಿ ನಮ್ಮ ನಾಡಿಗಳ ಚೈತನ್ಯವು ಮಾಯವಾಗಿ ಕಲ್ಲಾಗುತ್ತದೆ. ನಮ್ಮ ಆಯುಷ್ಯವು ಕಳೆದು ಹೋಗುತ್ತಿರುವಾಗ ಜಗತ್ತಿನಲ್ಲಿ ಅತ್ತಿತ್ತ ತಲೆಗೆ ಬಡಿದ ಹಾಗೆಲ್ಲ ನಮ್ಮ ಮನಸ್ಸು ಮತ್ತಿಷ್ಟು ಕಲ್ಲಾಗುತ್ತದೆ, ಜಡವಾಗುತ್ತದೆ. ನಮ್ಮ ಕಣ್ಣೆದುರಿನಲ್ಲಿಯೇ ಸ್ಪಷ್ಟವಾಗಿ ಒಂದೇಸಮನೆ ಸಂಭವಿಸುವ ಸಾಮಾನ್ಯ ಸಂಗತಿಗಳನ್ನು ಕೂಡ ಕಾಣದಷ್ಟು ನಾವು ಅಂಧರೂ ಜಡರೂ ಆಗುತ್ತೇವೆ. ಆದರೂ ಒಮ್ಮೆಲ್ಲೊಮ್ಮೆಯಾದರೂ ಮನುಷ್ಯಸ್ವಭಾವವು ಅಂತರ್ಮುಖಿಯಾಗಿ ಈ ಸಾಮಾನ್ಯ ಸಂಗತಿಗಳ ಅಂತಃಪರೀಕ್ಷಣೆಯನ್ನೂ ವಿಚಾರಣೆಯನ್ನೂ ಮಾಡತೊಡಗಿ ಆಶ್ಚರ್ಯ ಚಕಿತವಾಗುತ್ತದೆ. ಈ ಆಶ್ಚರ್ಯಭಾವವೇ ಆತ್ಮಜ್ಞಾನ ಸಂಪಾದನೆಯ ಮಾರ್ಗದಲ್ಲಿಯ ಮೊದಲನೇ ಮೆಟ್ಟಲು. ಶಬ್ದಕ್ಕಿರುವ ಈ ತಾತ್ವಿಕ ಮತ್ತು ಧಾರ್ಮಿಕ ಮಹತ್ವವನ್ನು ಕೆಲ ಹೊತ್ತು ಬದಿಗಿರಿಸಿದರೂ ಈ ಶಾಬ್ದಿಕ ಸಂಕೇತಗಳು ಮನುಷ್ಯನ ಸಂಸಾರ ನಾಟಕದಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ನಾನು ಈಗ ನಿಮ್ಮ ಕೂಡ ಮಾತನಾಡುತ್ತಿರುವೆನು. ಆದರೆ ನಿಮ್ಮನ್ನು ನಾನು ಅಂಟಿಕೊಂಡಿಲ್ಲ. ನನ್ನ ಭಾಷಣದಿಂದ ವಾತಾವರಣದಲ್ಲಿ ಹುಟ್ಟಿದ ತರಂಗಗಳು ನಿಮ್ಮ ಕಿವಿಗಳಲ್ಲಿ ಹೊಕ್ಕು ನಾಡಿಗಳನ್ನು ಮುಟ್ಟಿ ಮನಸ್ಸಿನ ಮೇಲೆ ಸಂಸ್ಕಾರಗಳನ್ನುಂಟುಮಾಡುತ್ತವೆ. ನೀವು ಇದನ್ನು ನಿರ್ಬಂಧಿಸಲಾರಿರಿ. ಇದಕ್ಕಿಂತ ಹೆಚ್ಚಿನ ಆಶ್ಚರ್ಯ ಮತ್ತೇನು ಬೇಕು? ಒಬ್ಬನು ಮತ್ತೊಬ್ಬನನ್ನು ಮೂರ್ಖನೆಂದು ಕರೆಯುತ್ತಾನೆ. ಕೂಡಲೇ, ಮೂರ್ಖನೆನ್ನಿಸಿಕೊಂಡವನು ಎದ್ದು ನಿಂತು ಕೈತೋಳನ್ನೇರಿಸಿ ಬೈದವನ ಕೆನ್ನೆಗೆ ಮುಷ್ಟಿಯಿಂದ ಚನ್ನಾಗಿ ಏಟೂ ಕೊಡುತ್ತಾನೆ. ಶಬ್ದದ ಮಹಾತ್ಮ್ಯವನ್ನು ನೋಡಿರಿ! ಒಬ್ಬ ಹೆಂಗುಸು ಅಳುತ್ತ ದುಃಖಿಸುತ್ತ ನಿಂತಿರುತ್ತಾಳೆ. ಆ ದಾರಿಯಿಂದ ಬಂದ ಮತ್ತೊಬ್ಬ ಹೆಂಗುಸು ನಾಲ್ಕು ಸಮಾಧಾನದ ಮಾತು ಹೇಳುತ್ತಾಳೆ. ಆ ಕ್ಷಣದಲ್ಲಿಯೇ ಆ ಅಳುವ ಹೆಂಗುಸಿನ ಮುದುಡಿಕೊಂಡಿದ್ದ ದೇಹವು ಉಬ್ಬಿಕೊಳ್ಳುತ್ತದೆ.

ಆಕೆಯ ದುಃಖವೆಲ್ಲ ಮಾಯವಾಗಿ ಮುಖದ ಮೇಲೆ ನಗೆಯು ತೇಲುತ್ತದೆ. ಶಬ್ದಗಳ ಸಾಮರ್ಥ್ಯವನ್ನು ನೋಡಿರಿ! ನಿತ್ಯದ ಸಾಮಾನ್ಯ ವ್ಯವಹಾರ ದಲ್ಲಿಯೂ ಉಚ್ಚ ತತ್ವಜ್ಞಾನ ವಿಚಾರದಲ್ಲಿಯೂ ಶಬ್ದದ ಸಾಮರ್ಥ್ಯವು ಅದ್ಭುತವಾದದ್ದು. ಈ ಶಕ್ತಿಯನ್ನು ನಾವು ತಿಳಿಯದೆ ಯೋಚಿಸದೆ ಹಗ ಲಿರುಳೂ ಉಪಯೋಗಿಸುತ್ತೇವೆ. ಈ ಶಕ್ತಿಯ ಸ್ವರೂಪವನ್ನರಿತುಕೊಂಡು ಅದರ ಸದ್ವಿನಿಯೋಗ ಮಾಡಿಕೊಳ್ಳುವುದೂ ಕರ್ಮಯೋಗದ ಒಂದು ವಿಷಯ.

ಎರಡನೆಯವರ ವಿಷಯದಲ್ಲಿ ನಮ್ಮ ಕರ್ತವ್ಯವೆಂದರೆ ಅವರಿಗೆ ನೆರವಾ ಗುವುದು, ಲೋಕಹಿತಕಾರ್ಯವನ್ನು ಮಾಡುವುದು. ಲೋಕಹಿತಕಾರ್ಯ ವನ್ನು ಏಕೆ ಮಾಡಬೇಕು? ತೋರಿಕೆಗೆ ಲೋಕಕಾರ್ಯವನ್ನು ಮಾಡ ಬೇಕು. ಜನಸಹಾಯಕ್ಕಾಗಿ ನಾವು ಯಾವಾಗಲೂ ಯತ್ನಿಸಬೇಕೆಂಬುದು ನಮ್ಮ ಪರಮಧ್ಯೇಯವಾಗಿರಬೇಕು. ಇದು ಸರಿಯಾದದ್ದು. ಆದರೆ ಚನ್ನಾಗಿ ಯೋಚಿಸಿ ನೋಡಲಾಗಿ ಜಗತ್ತು ನಮ್ಮ ಸಹಾಯವನ್ನೇನೂ ಅಪೇಕ್ಷಿಸಿ ನಿಂತಿಲ್ಲೆಂಬುದು ನಮಗೆ ಗೊತ್ತಾಗುವುದು. ಜಗತ್ತು ನಿರ್ಮಾಣ ವಾದದ್ದು ನಾನಾಗಲೀ ನೀವಾಗಲೀ ಒಂದು ಲೋಕಕಾರ್ಯಕ್ಕೆ ಸಹಾಯ ಮಾಡಬೇಕೆಂದಲ್ಲ. ನಾನೊಂದು ಧರ್ಮಪಾಠವನ್ನು ಒಮ್ಮೆ ಓದುತ್ತಿದ್ದೆ. ಅದರಲ್ಲಿ 'ಈ ಸುಂದರವಾದ ಜಗತ್ತು ಬಹು ಚನ್ನಾಗಿದೆ. ಏಕೆಂದರೆ ಪರ ರಿಗೆ ನೆರವಾಗಲು ಅದು ವೇಳೆಯನ್ನೂ ಸುಸಂಧಿಯನ್ನೂ ಒದಗಿಸಿ ಕೊಡು ತ್ತದೆ' ಎಂದಿತ್ತು. ನೋಡಲು ಇದೇನೋ ಬಹು ಸುಂದರವಾದ ವಿಚಾರ. ಆದರೆ ಜಗತ್ತಿಗೆ ನಮ್ಮ ಸಹಾಯದ ಅವಶ್ಯಕತೆಯಿರುವುದೆಂದು ಹೇಳು ವುದು ದೇವದ್ರೋಹವಲ್ಲವೇ? ಲೋಕದಲ್ಲಿ ದುಃಖವು ಬಹಳವಿರುವು ದೆಂಬುದು ಸುಳ್ಳಲ್ಲ. ಆದ್ದರಿಂದ ಪರರಿಗೆ ನೆರವಾಗತೊಡಗುವುದು ಉತ್ತಮ ವಾದ ಕಾರ್ಯ. ಆದರೆ ಈ ಪರಸಹಾಯವೆಂಬುದೇ ಸ್ವಸಹಾಯವಾಗುವು ದೆಂಬ ತತ್ವವು ಕೊನೆಗೆ ತಿಳಿಯದಿರಲಾರದು. ನಾನು ಹುಡುಗನಿದ್ದಾಗ ನಮ್ಮಲ್ಲಿ ಕೆಲವು ಬಿಳಿ ಇಲಿಗಳಿದ್ದವು. ಅವುಗಳನ್ನು ಸಣ್ಣ ಗಾಲಿಗಳಿಂದ ಕೂಡಿದ ಒಂದು ಸಣ್ಣ ಪೆಟ್ಟಿಗೆಯಲ್ಲಿ ಇಟ್ಟಿದ್ದರು. ಇಲಿಗಳು ಆ ಚಕ್ರ ಗಳನ್ನು ದಾಟಿಹೋಗಲು ಯತ್ನಿಸಿದಾಗ ಚಕ್ರಗಳು ಒಂದೇ ಸವನೆ ತಿರುಗು ತ್ತಿದ್ದುದರಿಂದ ಹೋಗಲು ಅನುವು ಸಿಗುತ್ತಿರಲಿಲ್ಲ. ಈ ಜಗತ್ತೂ ಅದಕ್ಕೆ

ನಾವು ನೆರವಾಗುವುದೂ ಅದೇ ರೀತಿಯಾಗಿದೆ. ನಮ್ಮ ನೈತಿಕ ಬಲವನ್ನು ಹೆಚ್ಚಿಸಿಕೊಳ್ಳಲು ಈ ಪ್ರಪಂಚವು ಗರಡೀಮನೆಯಂತೆ ಸಾಧನಭೂಮಿ ಯಾಗುವುದರಿಂದ ಸಹಾಯವಾಗುವುದು. ಈ ಪ್ರಪಂಚವು ಒಳ್ಳೆಯದೂ ಅಲ್ಲ, ಕೆಟ್ಟದ್ದೂ ಅಲ್ಲ. ಪ್ರತಿಯೊಬ್ಬ ಮನುಷ್ಯನು ತನ್ನ ಒಂದು ಪ್ರಪಂಚ ವನ್ನೇ ನಿರ್ಮಾಣಮಾಡಿಕೊಳ್ಳುತ್ತಾನೆ. ಕುರುಡರು ಪ್ರಪಂಚವನ್ನು ಅದು ಮೆತ್ತಗಾಗಲೀ ಬಿರುಸಾಗಲೀ ತಣ್ಣಗಾಗಲಿ ಬಿಸಿಯಾಗಲಿ ಇರಬಹು ದೆಂದು ಕಲ್ಪನೆ ಮಾಡಬಹುದು. ನಾವು ಸುಖಿಗಳಾಗಲಿ ದುಃಖಿಗಳಾಗಲಿ ಇರುವೆವೆಂಬುದನ್ನು ನಮ್ಮ ಆಯುಷ್ಯದಲ್ಲಿ ಅನೇಕ ಸಲ ಕಂಡಿದ್ದೇವೆ. ಸಾಮಾನ್ಯವಾಗಿ ತರುಣರೆದುರಿಗೆ ಜೀವನ ಸಾಮ್ರಾಜ್ಯವು ವಿಸ್ತಾರವಾಗಿ ಹಬ್ಬಿ ನಿಂತಿರುತ್ತದೆ. ವೃದ್ಧರು ತಮ್ಮ ಕಾಲವು ತೀರಿತೆಂದು ಶೋಕಿಸು ತ್ತಾರೆ. ತಾವು ಪೂರ್ಣಗೊಳಿಸಲಶಕ್ಯವಾದ ಅನೇಕ ವಿಚಾರತರಂಗಗಳು ಅವರ ಹೃದಯದಲ್ಲಿ ಉದ್ಭವಿಸುತ್ತವೆ. ಆದರೂ ಇಬ್ಬರೂ ಮೂರ್ಖರೆಂದೇ ಹೇಳಬೇಕು. ವಸ್ತುತಃ ಜೀವನದಲ್ಲಿ ಸುಖವೂ ಇಲ್ಲ, ಕಷ್ಟವೂ ಇಲ್ಲ. ಅದರ ಒಳಿತು ಕೆಡುಕು ಸ್ಥಿತಿಗಳು ನಮ್ಮ ಮನಸ್ಸಿನ ಸ್ಥಿತಿಯನ್ನವಲಂಬಿ ಸಿರುತ್ತವೆ. ಅಗ್ನಿ ತನ್ನಷ್ಟಕ್ಕೆ ತಾನೇ ಒಳ್ಳೆಯದೂ ಅಲ್ಲ, ಕೆಟ್ಟದೂ ಅಲ್ಲ. ನಮ್ಮ ಚಳಿಯನ್ನು ಹೊಡೆದು ಹಾಕಿದರೆ ಅಗ್ನಿಯು ಬಹಳ ಉತ್ತಮವೆಂದು ಹೇಳುತ್ತೇವೆ. ಅದು ನಮ್ಮ ಕೈಬೆರಳುಗಳನ್ನು ಸುಟ್ಟರೆ ಕೆಟ್ಟದೆಂದು ಹೇಳು ತ್ತೇವೆ. ಆದರೂ ನಿಜವಾಗಿ ಅದು ಒಳಿತೂ ಅಲ್ಲ, ಕೆಟ್ಟದೂ ಅಲ್ಲ. ಚಲೋ ಕೆಟ್ಟ ಎಂಬ ಭಾವನೆಗಳು ಅದರ ಸದುಪಯೋಗ ದುರುಪಯೋಗವನ್ನು ಹೊಂದಿವೆ. ಜಗತ್ತೂ ಅದರಂತೆಯೇ. ಅದು ಪರಿಪೂರ್ಣವಾಗಿದೆ; ಎಂದರೆ ತನ್ನ ಕೆಲಸವನ್ನು ತಾನೇ ಸಾಗಿಸಿಕೊಂಡು ಹೋಗುವಷ್ಟು ಸಾಮರ್ಥ್ಯ ವುಳ್ಳದ್ದಾಗಿದೆ. ನಾವು ಇಲ್ಲದಿದ್ದರೂ ಜಗತ್ತು ಸುಂದರವಾಗಿ ನಡೆದುಕೊಂಡು ಹೋಗುವುದೆಂಬುದನ್ನು ನಾವು ಚನ್ನಾಗಿ ಮನಗಾಣಬೇಕು. ಅದಕ್ಕೆ ನೆರವಾಗಬೇಕೆಂಬ ಲವಲವಿಕೆಯಿಂದ ನಾವು ಕಾತರರಾಗಕೂಡದು.

ಆದರೂ ಲೋಕಕಲ್ಯಾಣವನ್ನು ಮಾಡಬೇಕೆಂಬುದೂ ನಿಜವೇ. ಪರೋಪಕಾರವೊಂದು ಪರಮಭಾಗ್ಯವೆಂದು ತಿಳಿಯುವುದರಿಂದ ಕಾರ್ಯ ಮಾಡಲು ನಮಗೆ ಸ್ಫೂರ್ತಿ ಬರುತ್ತದೆ. ದೊಡ್ಡ ಸಿಂಹಾಸನದ ಮೇಲೆ ಕುಳಿತುಕೊಂಡು ಕೈಯಲ್ಲಿ ನಾಲ್ಕು ರೂಪಾಯಿಗಳನ್ನು ಹಿಡಿದುಕೊಂಡು

"ಇಕೋ ದರಿದ್ರನೇ, ಈ ನಾಲ್ಕು ರೂಪಾಯಿಗಳನ್ನು ತೆಗೆದುಕೊ" ಎಂದು ಅಹಂಕಾರದಿಂದ ನುಡಿಯಬೇಡ. ಆ ಮನುಷ್ಯನು ಬಡವನಿದ್ದುದರಿಂದಲೇ ಅವನಿಗೆ ನೀನು ದಾನಮಾಡಲು ಅವಕಾಶ ಸಿಕ್ಕು ನೀನು ಸ್ವಹಿತ ಮಾಡಿಕೊಳ್ಳಲಿಕ್ಕೆ ಸಮರ್ಥನಾದೆಯೆಂಬುದನ್ನು ತಿಳಿದು ಆ ಬಡವನಿಗೆ ನೀನು ಕೃತಜ್ಞನಾಗಿರಬೇಕು. ಧನ್ಯನು ದಾನವನ್ನು ಸ್ವೀಕಾರಮಾಡಿದವನಲ್ಲ, ದಾನಮಾಡಿದವನು. ಪ್ರಪಂಚಕ್ಕೆ ನಿಮ್ಮ ದಾನಶಕ್ತಿಯನ್ನೂ ಭೂತದಯೆಯನ್ನೂ ತೋರಿಸಿ ಸಾಧನೆಗೈದು ಶುದ್ಧನೂ ಪರಿಪೂರ್ಣನೂ ಆಗಲಿಕ್ಕೆ ಅನುವು ದೊರೆಯಿತೆಂದು ಕೃತಜ್ಞತೆಯನ್ನು ತೋರ್ಪಡಿಸಬೇಕು. ಸತ್ಕಾರ್ಯಗಳಿಂದ ನಾವು ಶುದ್ಧರೂ ಪರಿಪೂರ್ಣರೂ ಆಗಲು ಅನುಕೂಲವಾಗುತ್ತದೆ. ಹೆಚ್ಚೆಂದರೆ ನಾವು ಮಾಡುವುದಾದರೂ ಏನು?—ಆಸ್ಪತ್ರೆಗಳನ್ನು ಕಟ್ಟುವುದು, ಬೀದಿಗಳನ್ನು ನಿರ್ಮಿಸುವುದು, ಅನಾಥಾಶ್ರಮಗಳನ್ನು ಸ್ಥಾಪಿಸುವುದು ಇವೇ ಅಲ್ಲವೇ? ಒಂದು ದೊಡ್ಡ ಧರ್ಮನಿಧಿಯನ್ನು ಏರ್ಪಡಿಸಿ ಎರಡು ಮೂರು ಕೋಟಿ ರೂಪಾಯಿಗಳನ್ನು ಕಲೆಹಾಕಿ ಒಂದು ಕೋಟಿಯಿಂದ ಆಸ್ಪತ್ರೆ ಕಟ್ಟಿಸಿ ಎರಡನೇ ಕೋಟಿಯನ್ನು ಕುಣಿತ ಕುಡಿತಗಳಲ್ಲಿಯೂ ಮೂರನೇ ಕೋಟಿಯಲ್ಲಿ ಅರ್ಧದಷ್ಟು ಸರಕಾರೀ ಅಧಿಕಾರಿಗಳಿಗೆ ಲಂಚವೆಂದು ಹಾಳುಮಾಡಿಯೂ ಉಳಿದ ಅಲ್ಪಸ್ವಲ್ಪ ಹಣವನ್ನು ಬಡವರಿಗಾಗಿ ಉಪಯೋಗಿಸುವುದೇ ನಮ್ಮ ರೀತಿ. ಆದರೆ ಇವೆಲ್ಲವುಗಳಿಂದ ಆಗುವುದಾದರೂ ಏನು? ಒಂದು ದೊಡ್ಡ ಬಿರುಗಾಳಿಯಿಂದ ಐದು ನಿಮಿಷಗಳಲ್ಲಿ ನಿಮ್ಮ ಕಟ್ಟಡಗಳೆಲ್ಲ ಒಡೆದು ಪುಡಿಪುಡಿಯಾಗಬಹುದು. ಆಗ ನೀವು ಮಾಡುವುದೇನು? ಜ್ವಾಲಾಮುಖಿಯ ಪ್ರವಾಹವು ಸಿಡಿದೆದ್ದು ಹೊರಸೂಸಿ ನಮ್ಮ ಸುಂದರ ಬೀದಿಗಳನ್ನೂ ಆಸ್ಪತ್ರೆಗಳನ್ನೂ ಪಟ್ಟಣಗಳನ್ನೂ ಕಟ್ಟಡಗಳನ್ನೂ ಕೊಚ್ಚಿಕೊಂಡು ಹೋಗಬಹುದು. ಆದ್ದರಿಂದ ಲೋಕಹಿತವನ್ನು ಮಾಡುವೆವೆಂಬ ಮೂರ್ಖತನದ ಮಾತುಗಳನ್ನು ನಾವು ಬಿಟ್ಟುಬಿಡಬೇಕು. ಜಗತ್ತು ನಿಮ್ಮ ಸಹಾಯವನ್ನಾಗಲಿ ನನ್ನ ಸಹಾಯವನ್ನಾಗಲಿ ಅಪೇಕ್ಷಿಸಿಕೊಂಡು ಕುಳಿತಿಲ್ಲ. ಆದರೂ ನಾವು ಸತತವಾಗಿ ಕಾರ್ಯ ಮಾಡಿ ಪರೋಪಕಾರವನ್ನು ಮಾಡುತ್ತಿರಬೇಕು. ಏಕೆಂದರೆ ಆದರಿಂದ ನಮಗೇ ಕಲ್ಯಾಣವಾಗುತ್ತದೆ. ನಾವು ಪೂರ್ಣತೆಯನ್ನು

ಹೊಂದಲು ಅದೊಂದೇ ಮಾರ್ಗ. ನಮ್ಮಿಂದ ನೆರವು ಪಡೆದ ಯಾವ ಭಿಕ್ಷುಕನೂ ನಮಗೆ ಋಣಿಯಾಗಬೇಕಾದ ಅಗತ್ಯವಿಲ್ಲೆಂಬುದನ್ನು ನಾವು ಮರೆಯಬಾರದು. ದಾನಸಾಧನೆಗೈಯಲು ನಮಗೆ ಅನುವು ಮಾಡಿ ಕೊಟ್ಟದ್ದಕ್ಕಾಗಿ ನಾವೇ ಅವನಿಗೆ ಋಣಿಯಾಗಿರಬೇಕು. ಜಗತ್ತಿಗೆ ನಾವು ಕಲ್ಯಾಣವನ್ನು ಮಾಡಬಲ್ಲೆವೆಂದೂ ಮಾಡಿರುವೆವೆಂದೂ ಇಂಥಿಂಥವ ರಿಗೆ ನೆರವಾಗಿರುವೆವೆಂದೂ ತಿಳಿದುಕೊಳ್ಳುವುದು ತೀರ ತಪ್ಪು—ಮೂರ್ಖ ತನದ ಮಾತು. ಮೂರ್ಖತನದಿಂದ ದುಃಖವು ಮಾತ್ರ ಉಂಟಾಗುವುದು. ಒಬ್ಬನಿಗೆ ನಾವು ಸಹಾಯ ಮಾಡಿದಾಗ ಅವನು ನಮ್ಮ ಉಪಕಾರ ನೆನೆಯ ಬೇಕೆಂದು ನಾವು ಬಯಸುತ್ತೇವೆ. ಅವನು ಹಾಗೆ ಮಾಡದಿದ್ದರೆ ನಮಗೆ ದುಃಖವಾಗುವುದು. ನಾವು ಏನಾದರೊಂದನ್ನು ಮಾಡಿದ್ದಕ್ಕೆ ಪ್ರತಿಫಲ ವನ್ನೇಕೆ ಅಪೇಕ್ಷಿಸಬೇಕು? ನಿಮ್ಮ ನೆರವು ಪಡೆದ ಮನುಷ್ಯನಿಗೆ ನೀವು ಕೃತಜ್ಞರಾಗಿ ಅವನೇ ದೇವರೆಂದು ಭಾವಿಸಿರಿ. ಜನತೆಗೆ ಸಹಾಯಮಾಡು ವುದರಿಂದಲೇ ಜನಾರ್ದನನ ಪೂಜೆಗೈಯುವ ಅನುವು ಒದಗಿರುವುದು ನಮ್ಮ ಪರಮ ಭಾಗ್ಯವಲ್ಲವೇ? ನಾವು ನಿಜವಾಗಿ ಅನಾಸಕ್ತರಾಗಿದ್ದರೆ ವ್ಯರ್ಥವಾಗಿ ಪ್ರತಿಫಲವನ್ನು ಬಯಸುವುದರಿಂದುಟಾಗುವ ನೋವು ನಮ್ಮನ್ನು ಬಾಧಿಸಲಾರದು. ನಾವು ಶಾಂತಚಿತ್ತದಿಂದ ಲೋಕಹಿತ ಕಾರ್ಯ ವನ್ನು ಮಾಡಲು ಶಕ್ತರಾಗುವೆವು. ಫಲಾಪೇಕ್ಷೆಯಿಲ್ಲದೆ ಮಾಡಿದ ಕಾರ್ಯ ಗಳಿಂದ ನಮಗೆಂದೂ ದುಃಖವಾಗದು. ಲೋಕದಲ್ಲಿ ಸುಖದುಃಖಗಳು ಎಂದಿಗೂ ತಪ್ಪುವ ಮಾತಲ್ಲ.

ಒಬ್ಬ ಬಡವನಿಗೆ ಹಣವು ಬೇಕಾಗಿತ್ತು. ಹೇಗಾದರೂ ಮಾಡಿ ಒಂದು ಪಿಶಾಚಿಯನ್ನು ವಶಮಾಡಿಕೊಂಡರೆ ತನಗೆ ಬೇಕಾದಷ್ಟು ಹಣವನ್ನಾಗಲಿ ತನಗಿಷ್ಟವಾದ ಮತ್ತೇನನ್ನಾದರೂ ಆಗಲಿ ಒದಗಿಸಲು ಆ ಪಿಶಾಚಿಗೆ ಆಜ್ಞೆ ಮಾಡಬಹುದೆಂದು ಅವನಿಗೆ ಯಾರೋ ಹೇಳಿದ್ದರು. ಆದ್ದರಿಂದ ಪಿಶಾಚಿ ಯೊಂದನ್ನು ದೊರಕಿಸಲು ಅವನು ಬಲು ಕಾತರನಾಗಿದ್ದನು. ಅವನು ತನಗೆ ಅಂಥ ಪಿಶಾಚಿಯನ್ನು ದೊರಕಿಸಿಕೊಡಬಹುದಾದ ಮನುಷ್ಯನನ್ನು ಹುಡುಕ ತೊಡಗಿದನು. ಕೊನೆಗೆ ಅವನು ಅದ್ಭುತ ಯೋಗಸಾಮರ್ಥ್ಯವುಳ್ಳ ಒಬ್ಬ ಯೋಗಿಯನ್ನು ಕಂಡು ಅವನ ಸಹಾಯವನ್ನು ಬೇಡಿಕೊಂಡನು. ಪಿಶಾಚಿ ಯನ್ನು ತೆಗೆದುಕೊಂಡು ಏನು ಮಾಡುವೆ ಎಂದು ಯೋಗಿಯು ಅವನನ್ನು

ಕೇಳಿದನು. 'ಪಿಶಾಚಿಯು ನನಗಾಗಿ ದುಡಿಯಲು ಬೇಕಾಗಿರುವುದು. ಸ್ವಾಮೀ, ಅವನ್ನು ಹೇಗೆ ವಶಮಾಡಿಕೊಳ್ಳಬೇಕೆಂಬುದನ್ನು ದಯವಿಟ್ಟು ತಿಳಿಸಿರಿ. ನನಗೆ ಅದರ ಬಯಕೆ ತುಂಬಾ ಆಗಿದೆ' ಎಂದು ಬಡವನು ಉತ್ತರಕೊಟ್ಟನು. 'ನೀನು ಹೀಗೆ ವ್ಯರ್ಥ ಶ್ರಮಪಡಬೇಡ, ಚಿಂತಾಕುಲ ನಾಗಬೇಡ. ಮನೆಗೆ ಹೋಗು' ಎಂದು ಯೋಗಿಯು ಹೇಳಿದನು. ಆದರೂ ಮರುದಿನ ಆ ಬಡವನು ಆ ಯೋಗಿಯ ಕಡೆಗೆ ಮತ್ತೊಮ್ಮೆ ಹೋಗಿ ಅತ್ತು, ಆಕ್ರೋಶಿಸಿ 'ಸ್ವಾಮಿ, ನನಗೆ ಸಹಾಯಮಾಡುವುದಕ್ಕಾಗಿ ಒಂದು ಪಿಶಾಚಿಯು ಬೇಕೇಬೇಕು. ದಯವಿಟ್ಟು ಅದನ್ನು ದೊರಕಿಸಿ ಕೊಡಿರಿ' ಎಂದು ಪ್ರಾರ್ಥಿಸಿ ಒತ್ತಾಯಪಡಿಸತೊಡಗಿದನು. ಕೊನೆಗೆ ಆ ಯೋಗಿ ಬೇಸರಪಟ್ಟು 'ಇಕೋ ಈ ಮಾಟವನ್ನು. ಈ ಮಾಟಮಂತ್ರ ವನ್ನು ಉಚ್ಚಾರಮಾಡು. ಪಿಶಾಚಿಯು ಬರುವುದು. ನೀನು ಮಾಡಹೇಳಿ ದ್ದನ್ನು ಅದು ಮಾಡುವುದು. ಆದರೆ ನೀನು ಯಾವಾಗಲೂ ಎಚ್ಚರ ದಿಂದಿರಬೇಕು. ಅವು ಬಹಳ ಭಯಂಕರ ಪ್ರಾಣಿಗಳು. ಅವುಗಳನ್ನು ಯಾವಾಗಲೂ ಕಾರ್ಯದಲ್ಲಿ ತೊಡಗಿಸಬೇಕು. ಅದಕ್ಕೆ ತಕ್ಕಷ್ಟು ಕೆಲಸ ಕೊಡಲು ತಪ್ಪಿದರೆ ಅದು ನಿನ್ನ ಜೀವವನ್ನೇ ಅಪಹರಿಸುವುದು' ಎಂದು ಹೇಳಿದನು. 'ಅದೆಷ್ಟು ದೊಡ್ಡ ಕೆಲಸ! ಅದು ಸಾಯುವವರೆಗೆ ಮಾಡುವಷ್ಟು ಕೆಲಸವನ್ನು ಕೊಡಬಹುದು' ಎಂದು ಬಡವನು ಧೈರ್ಯವಾಗಿ ಉತ್ತರ ಕೊಟ್ಟನು. ಆ ಮೇಲೆ ಅವನು ಒಂದು ಕಾಡಿಗೆ ಹೋಗಿ ಆ ಮಾಟದ ಮಂತ್ರ ವನ್ನು ಬಹು ಕಾಲದವರೆಗೆ ಪುರಶ್ಚರಣ ಮಾಡಿದ ಮೇಲೆ, ಒಂದು ಅದ್ಭುತಾ ಕಾರದ ಪಿಶಾಚಿಯು ಎದುರಿಗೆ ಬಂದು 'ನಿನ್ನ ಮಂತ್ರಶಕ್ತಿಯಿಂದ ನಾನು ನಿನಗೆ ವಶವಾಗಿದ್ದೇನೆ. ಆದರೆ ನೀನು ನನ್ನನ್ನು ಯಾವಾಗಲೂ ಕೆಲಸದಲ್ಲಿ ತೊಡಗಿಸಬೇಕು. ಕೆಲಸ ಕೊಡಲು ತಪ್ಪಿದ ಕ್ಷಣದಲ್ಲಿಯೇ ನಿನ್ನನ್ನು ಕೊಂದುಬಿಡುತ್ತೇನೆ' ಎಂದು ಹೇಳಿತು. ಬಡವನು ತನಗೊಂದು ಅರಮನೆ ಯನ್ನು ಕಟ್ಟಿಕೊಡಲು ಹೇಳಿದನು. ಅರಮನೆ ಕಟ್ಟಿ ಸಿದ್ಧವಾಯಿತೆಂದು ಪಿಶಾಚಿ ಕೂಡಲೇ ಉತ್ತರಕೊಟ್ಟಿತು. 'ಅಪಾರವಾದ ದ್ರವ್ಯವನ್ನು ತಂದು ಕೊಡು' ಎಂದು ಬಡವನು ಹೇಳಿದನು. 'ಇಕೊ, ನಿನಗೆ ಬೇಕಾದ ಹಣ ಇಲ್ಲಿದೆ' ಎಂದು ಪಿಶಾಚಿ ಹೇಳಿತು. ಬಡವನು 'ಈ ಅರಣ್ಯವನ್ನೆಲ್ಲ ಕಡಿದು ಹಾಕಿ ಆ ಸ್ಥಳದಲ್ಲಿ ಒಂದು ಪಟ್ಟಣವನ್ನು ಕಟ್ಟು' ಎಂದನು. 'ಅದು

ಕೂಡ ಆಗಿಹೋಯಿತು. ಮಾಡಲು ಮತ್ತೇನು ಇದೆ? ' ಎಂದಿತು ಪಿಶಾಚಿ. ಈಗ ಬಡವನು ಹೆದರಿಬಿಟ್ಟ. ಇನ್ನೇನು ಕೆಲಸ ಹೇಳಬೇಕೆಂದು ಅವನಿಗೆ ತೋರಲಿಲ್ಲ. ಹೇಳಿದ್ದನ್ನೆಲ್ಲ ಕಣ್ಣು ಮುಚ್ಚಿ ತೆರೆಯುವುದರೊಳಗಾಗಿ ಪಿಶಾಚಿಯು ಮಾಡಿಬಿಡುತ್ತಿತ್ತು. ಅದು ' ನನಗೇನಾದರೂ ಕೆಲಸ ಹೇಳು; ಇಲ್ಲದಿದ್ದರೆ ನಿನ್ನನ್ನು ತಿಂದುಬಿಡುತ್ತೇನೆ ' ಎಂದು ಗದರಿಸತೊಡಗಿತು. ಹೇಳಲು ಮತ್ತೇನೂ ಕೆಲಸವು ತೋಚದೆ ಬಡವನು ಭಯದಿಂದ ನಡುಗತೊಡಗಿದನು. ಕೊನೆಗೆ ಅವನು ಓಡುತ್ತ ಓಡುತ್ತ ಹೋಗಿ ಆ ಯೋಗಿಯನ್ನು ಕಂಡು ' ಸ್ವಾಮಿ, ಹೇಗಾದರೂ ನನ್ನನ್ನು ಕಾಪಾಡಿರಿ' ಎಂದು ಅಂಗಲಾಚಿ ಬೇಡಿಕೊಂಡನು. ಯೋಗಿಯು ನಡೆದ ಸಂಗತಿಯನ್ನು ಕೇಳಿದನು. ' ಪಿಶಾಚಿಗೆ ಮಾಡಹೇಳಲು ಕೆಲಸವೇನೂ ಉಳಿಯಲಿಲ್ಲ. ಹೇಳಿದ್ದನ್ನೆಲ್ಲ ಅದು ನಿಮಿಷಮಾತ್ರದಲ್ಲಿ ಮಾಡಿಬಿಡುತ್ತದೆ. ಮತ್ತೆ ಕೆಲಸವನ್ನು ಕೊಡದಿದ್ದರೆ ನನ್ನನ್ನು ತಿಂದುಬಿಡುವೆನೆಂದು ಹೆದರಿಸುತ್ತದೆ ' ಎಂದು ಬಡವನು ಹೇಳಿದನು. ಅಷ್ಟರಲ್ಲಿ ಆ ಪಿಶಾಚಿಯೂ ' ನಿನ್ನನ್ನು ತಿಂದುಬಿಡುತ್ತೇನೆ' ಎಂದು ಆರ್ಭಟಿಸುತ್ತ ಅಲ್ಲಿಗೆ ಬಂತು. ಆಗ ಆ ಬಡ ಮನುಷ್ಯನು ಹೆದರಿಕೆಯಿಂದ ನಡುಗುತ್ತ ತನ್ನ ಪ್ರಾಣವನ್ನುಳಿಸಿರೆಂದು ಯೋಗಿಯನ್ನು ಪ್ರಾರ್ಥಿಸಿಕೊಂಡನು. ಆ ಯೋಗಿಯು ' ನಾನು ನಿನಗೊಂದು ಯುಕ್ತಿಯನ್ನು ಹೇಳುತ್ತೇನೆ. ಅಲ್ಲಿ ಆ ಡೊಂಕು ಬಾಲದ ನಾಯಿಯನ್ನು ನೋಡು. ನಿನ್ನ ಕತ್ತಿಯಿಂದ ಅದರ ಬಾಲವನ್ನು ಕೊಯ್ದು ಆ ಪಿಶಾಚಿಯ ಕೈಯಲ್ಲಿ ಕೊಟ್ಟು ಅದನ್ನು ಸರಳ ಮಾಡಲು ಹೇಳು' ಎಂದನು. ಅವನು ಹೇಳಿದ ಹಾಗೆ ಆ ಬಡವನು ಆ ನಾಯಿಯ ಬಾಲವನ್ನು ಕೊಯ್ದು ಅದನ್ನು ಸರಿಪಡಿಸಲು ಪಿಶಾಚಿಗೆ ಹೇಳಿದನು. ಪಿಶಾಚಿಯು ಅದನ್ನು ಕೈಯಲ್ಲಿ ತೆಗೆದುಕೊಂಡು ಬಹಳ ಎಚ್ಚರಿಕೆಯಿಂದ ಮೆಲ್ಲನೆ ಸರಳ ಮಾಡಿ ಕೈಬಿಡುವಷ್ಟರಲ್ಲಿಯೇ ಅದು ಮರಳಿ ಸುರುಳಿಯಾಗುತ್ತಿತ್ತು. ಪಿಶಾಚಿಯು ಮತ್ತೊಮ್ಮೆ ಬಹಳ ಶ್ರಮಪಟ್ಟು ಬಾಲವನ್ನು ಸರಳಮಾಡಿತು. ಮತ್ತೆ ಕೈ ಬಿಡಲುಂ ಯತ್ನಿಸಿದ ಕೂಡಲೇ ಬಾಲವು ಪುನಃ ಸುತ್ತಿಕೊಂಡಿತು. ಮತ್ತೊಮ್ಮೆ ಪಿಶಾಚಿಯು ಸಮಾಧಾನದಿಂದ ಸರಿಮಾಡತೊಡಗಿತು. ಕೈ ಬಿಟ್ಟ ಕೂಡಲೇ ಮತ್ತೆ ಡೊಂಕೇ! ಹೀಗೆ ಅನೇಕ ದಿವಸಗಳ ವರೆಗೆ ಆ ಪಿಶಾಚಿಯು ಕೆಲಸ ಮಾಡಿ ದಣಿದು ಬೇಸತ್ತು " ನನ್ನ ಆಯುಷ್ಯದಲ್ಲಿ

ಹಿಂದೆ ನಾನು ಇಂಥ ವಿಷಮ ಪರಿಸ್ಥಿತಿಯಲ್ಲಿ ಎಂದೂ ಸಿಲುಕಿದ್ದಿಲ್ಲ. ನಾನು ವಯೋವೃದ್ಧ ಅನುಭವಿಕ ಪಿಶಾಚಿ. ಇಂಥ ತೊಡಕನ್ನು ಎದುರಿಸ ಬೇಕಾದದ್ದು ಇದೇ ಮೊದಲು. ನಾನು ಸೋತೆ. ನನ್ನನ್ನು ದಯವಿಟ್ಟು ಕ್ಷಮಿಸಿ ಬಿಟ್ಟುಬಿಡು. ನೀನು ನನ್ನನ್ನು ಬಿಡುಗಡೆ ಮಾಡಿದರೆ ನಾನು ನಿನಗೆ ಕೊಟ್ಟದ್ದನ್ನೆಲ್ಲ ಮರಳಿ ಕೇಳದೆ ನಿನಗೇ ಬಿಟ್ಟುಬಿಡುವೆನು. ಮತ್ತು ನಿನಗೆ ಏನೂ ಕೆಡುಕು ಮಾಡುವುದಿಲ್ಲವೆಂದು ವಚನ ಕೊಡುತ್ತೇನೆ" ಎಂದಿತು. ಬಡವನು ಆನಂದಭರಿತನಾಗಿ ಈ ಸೂಚನೆಯನ್ನು ಸಂತೋಷ ದಿಂದ ಒಪ್ಪಿಕೊಂಡನು.

ಈ ಜಗತ್ತು ನಾಯಿಯ ಡೊಂಕು ಬಾಲದಂತಿದೆ. ಜನರು ಅದನ್ನು ಸರಿಪಡಿಸಲು ಸಾವಿರಾರು ವರ್ಷಗಳಿಂದ ಯತ್ನಿಸುತ್ತಿರುವರು. ಸ್ವಲ್ಪ ಕೈ ಬಿಟ್ಟಕೂಡಲೆ ಅದು ಪುನಃ ಸುತ್ತಿಕೊಂಡು ಡೊಂಕಾಗುವದು. ಅದು ಅನ್ಯಥಾ ಇರಲು ಶಕ್ಯವಾದರೂ ಇದೆಯೆ? ಆಸಕ್ತಿಯಿಲ್ಲದೆ ಕಾರ್ಯ ಮಾಡುವ ಯುಕ್ತಿಯನ್ನು ನಾವು ಮೊದಲು ಕಲಿತುಕೊಂಡರೆ ನಾವು ಧರ್ಮಾಂಧ ರಾಗುವುದಿಲ್ಲ. ಈ ಜಗತ್ತು ನಾಯಿಯ ಬಾಲದಂತಿರುವುದೆಂದೂ ಅದೆಂದೂ ಸರಿಯಾಗಲಾರದೆಂದೂ ತಿಳಿದುಕೊಂಡಿದ್ದರೆ ನಾವು ಮೂಢ ಧರ್ಮಾಂಧ ರಾಗುವುದಿಲ್ಲ. ಪ್ರಪಂಚದಲ್ಲಿ ಈ ಮೂಢ ಧರ್ಮಾಂಧತೆಯು ಇರದಿದ್ದರೆ ಅದು ಈಗಿನಕಿಂತಲೂ ಹೆಚ್ಚು ಪ್ರಗತಿಯನ್ನು ಹೊಂದಬಹುದಾಗಿತ್ತು. ಮೂಢ ಧರ್ಮಾಂಧತೆಯಿಂದ ಜನತೆಯ ಪ್ರಗತಿಗೆ ಅನುಕೂಲವಾಗುವು ದೆಂದು ತಿಳಿದುಕೊಳ್ಳುವುದು ತೀರ ತಪ್ಪು. ಇದಕ್ಕೆ ವಿಪರೀತವಾಗಿ, ಅದು ಪ್ರಗತಿಮಾರ್ಗದಲ್ಲಿ ಅಡ್ಡಬರುವುದು. ಅದು ಕ್ರೋಧ ದ್ವೇಷಗಳನ್ನು ಹುಟ್ಟಿ ಸುವುದು. ಜನರನ್ನು ಒಬ್ಬರನ್ನು ಇನ್ನೊಬ್ಬರೊಂದಿಗೆ ಬಡಿದಾಡಹಚ್ಚು ವುದು. ಪರಸ್ಪರ ಸಹಾನುಭೂತಿಯನ್ನೂ ನಾಶಗೊಳಿಸುವುದು. ನಾವು ಮಾಡಿದ್ದೂ ನಮ್ಮ ಸ್ವಾಧೀನದಲ್ಲಿದ್ದದ್ದೂ ಜಗತ್ತಿನಲ್ಲೆಲ್ಲ ಮೇಲಾದ ದ್ದೆಂದೂ, ನಾವು ಮಾಡದಿದ್ದದ್ದೂ ನಮ್ಮಲ್ಲಿ ಇಲ್ಲದಿದ್ದದ್ದೂ ನಿರರ್ಥಕ ವಾದುದೆಂದೂ ನಾವು ತಿಳಿಯುತ್ತೇವೆ. ಆದ್ದರಿಂದ ಮೂಢ ಧರ್ಮಾಂಧ ನಾಗುವ ಲಕ್ಷಣಗಳು ಕಂಡ ಕೂಡಲೇ ನಾಯಿಯ ಈ ಡೊಂಕು ಬಾಲದ ದೃಷ್ಟಾಂತವನ್ನು ನಾವು ಸ್ಮರಿಸಬೇಕು. ನೀವು ಹದಿನೆಂಟು ದೇಶಗಳ ಚಿಂತೆಯಿಂದ ಮನಸ್ಸಿನಲ್ಲಿ ಕೊರಗಿಕೊಂಡು ನಿದ್ದೆಗೇಡಾಗಿ ಸೊರಗಬೇಡಿರಿ.

ನೀವಿಲ್ಲದಿದ್ದರೂ ಜಗತ್ತು ನಡೆಯುವಂತೆ ನಡೆದೇ ನಡೆಯುವುದು. ಮೂಢ ಧರ್ಮಾಂಧತೆಯನ್ನು ತೊರೆದಾಗ ಮಾತ್ರ ನೀವು ಚನ್ನಾಗಿ ಕೆಲಸ ಮಾಡ ಬಲ್ಲಿರಿ. ತಲೆಯನ್ನು ಸಮತೋಲವಾಗಿಟ್ಟುಕೊಂಡವನೂ ಶಾಂತನೂ ಸುವಿಚಾರಿಯೂ ಸಮಾಧಾನಿಯೂ ಪ್ರೇಮ ಭೂತದಯೆ ಸಹಾನುಭೂತಿ ಯುಳ್ಳವನೂ ಆದವನಿಂದ ಕೆಲಸವೂ ಚನ್ನಾಗಿ ಆಗುವುದು, ಸ್ವತಃ ಅವ ನಿಗೂ ಕಲ್ಯಾಣವಾಗುವುದು. ಮೂಢ ಧರ್ಮಾಂಧನು ಮೂರ್ಖನೂ ಸಹಾನುಭೂತಿಯಿಲ್ಲದವನೂ ಆಗಿರುತ್ತಾನೆ. ಅವನು ಜಗತ್ತನ್ನು ಎಂದೂ ಸರಿಪಡಿಸಲಾರ; ತಾನೂ ಆತ್ಮಶುದ್ಧಿಯನ್ನು ಹೊಂದಿ ಪೂರ್ಣತೆಯನ್ನು ಹೊಂದಲಾರ.

ಇಂದಿನ ಉಪನ್ಯಾಸದಲ್ಲಿ ಹೇಳಿದ ಮುಖ್ಯ ಮಾತುಗಳ ಸಾರಾಂಶ ವಿಷ್ಟೇ:— (೧) ಜಗತ್ತಿಗೆ ನಾವು ಋಣಿಗಳೇ ಹೊರತು ನಮಗೆ ಜಗತ್ತು ಋಣಿಯಲ್ಲವೆಂಬುದನ್ನು ಚನ್ನಾಗಿ ನೆನಪಿನಲ್ಲಿಡಬೇಕು. ಜಗತ್ತಿನ ಸೇವೆಗೆ ಅನುವು ದೊರೆಯುವುದು ನಮ್ಮ ಪರಮ ಭಾಗ್ಯ. ಲೋಕೋದ್ಧಾರ ಮಾಡು ವುದರಿಂದ ನಿಜವಾಗಿ ನಮ್ಮ ಉದ್ಧಾರವೇ ಆಗುತ್ತದೆ. (೨) ಈ ಪ್ರಪಂಚ ಕ್ಕೊಬ್ಬ ದೇವರಿದ್ದಾನೆ. ಈ ಪ್ರಪಂಚವು ಎಲ್ಲಿಯೋ ಹೇಗೋ ದಿಕ್ಕು ಗೆಟ್ಟು ನಡೆದಿದೆ ಮತ್ತು ಅದಕ್ಕೆ ನಮ್ಮ ನಿಮ್ಮ ಸಹಾಯವು ಬೇಕಾಗಿದೆ ಎಂಬುದು ಸರಿಯಲ್ಲ. ಅದರಲ್ಲಿ ದೇವರ ಸಾನ್ನಿಧ್ಯವು ಯಾವಾಗಲೂ ಇರುತ್ತದೆ. ದೇವರು ಅಜರಾಮರನೂ ಸತತೋದ್ಯೋಗಿಯೂ ಅತಿಶಯ ಜಾಗರೂಕನೂ ಆಗಿರುವನು. ಇಡೀ ಜಗತ್ತೇ ನಿದ್ದೆಹೋದಾಗಲೂ ಅವನು ಮಲಗುವುದಿಲ್ಲ. ಅವನು ನಿರಂತರವಾಗಿ ಕೆಲಸ ಮಾಡುತ್ತಿರು ತ್ತಾನೆ. ಜಗತ್ತಿನಲ್ಲಿಯ ಎಲ್ಲ ಸ್ಥಿತ್ಯಂತರಗಳೂ ಹೆಚ್ಚು ಕಡಿಮೆಗಳೂ ಆವಿ ರ್ಭಾವಗಳೂ ಅವನವೇ. (೩) ನಾವು ಯಾರನ್ನೂ ದ್ವೇಷಿಸಕೂಡದು. ಈ ಜಗತ್ತಿನಲ್ಲಿ ಯಾವಾಗಲೂ ಒಳಿತು ಕೆಡುಕುಗಳ ಬೆರಿಕೆಯೇ ಕಂಡುಬರು ವುದು. ದುರ್ಬಲರ ವಿಷಯದಲ್ಲಿ ಸಹಾನುಭೂತಿಪರರಾಗಿರುವುದೂ ದೋಷಿ ಯನ್ನು ಕೂಡ ಪ್ರೀತಿಸುವುದೂ ನಮ್ಮ ಕರ್ತವ್ಯ. ಈ ಪ್ರಪಂಚವಿಸ್ತಾರವು ಒಂದು ದೊಡ್ಡ ಭವ್ಯವಾದ ನೈತಿಕ ಗರಡಿಮನೆ. ಅದರಲ್ಲಿ ಹೊಕ್ಕು ನಾವೆ ಲ್ಲರೂ ಆಧ್ಯಾತ್ಮಿಕ ಸಾಧನೆಗೈದು ದಿನದಿನಕ್ಕೆ ಹೆಚ್ಚು ಹೆಚ್ಚು ಬಲವಂತ ರಾಗಬೇಕು. (೪) ಯಾವ ರೀತಿಯಿಂದಲೂ ನಾವು ಮೂಢ ಧರ್ಮಾಂಧರಾಗ

ಬಾರದು. ಮೂಢ ಧರ್ಮಾಂಧತೆಯು ಪ್ರೇಮಕ್ಕೆ ವಿರೋಧಿ. "ನಾವು ಪಾಪಿ ಮನುಷ್ಯನನ್ನು ದ್ವೇಷಿಸುವುದಿಲ್ಲ. ನಾವು ಅವನಲ್ಲಿದ್ದ ಪಾಪವನ್ನು ದ್ವೇಷಿಸುತ್ತೇವೆ" ಎಂದು ಕೆಲವು ಮೂಢ ಧರ್ಮಾಂಧರು ಹುಚ್ಚರಂತೆ ಬಡಬಡಿಸುವುದನ್ನು ನೀವೆಲ್ಲರೂ ಕೇಳಿರಬಹುದು. ಆದರೆ ಪಾಪ ಮತ್ತು ಪಾಪಿಯನ್ನು ನಿಜವಾಗಿ ವಿಂಗಡಿಸಬಲ್ಲ ಮನುಷ್ಯನನ್ನು ನನಗೆ ತೋರಿಸಿರಿ. ಅವನ ಮೋರೆಯನ್ನು ನೋಡಲು ಬೇಕಾದರೆ ನೂರಾರು ಗಾವುದಗಳನ್ನಾದರೂ ನಡೆದುಹೋಗುತ್ತೇನೆ. ಹಾಗೆ ಹೇಳುವುದೇನೊ ಬಹು ಸುಲಭ. ಆದರೆ ಹಾಗೆ ವಿಂಗಡಿಸಬಲ್ಲ ಮನುಷ್ಯನು ಸಿಗುವುದು ಕಷ್ಟ. ಒಂದು ವಸ್ತುವಿನಿಂದ ಅದರ ಗುಣಗಳನ್ನು ಬೇರೆ ಮಾಡುವಷ್ಟು ಸಾಮರ್ಥ್ಯವು ನಮ್ಮಲ್ಲುಂಟಾಗಿದ್ದಾದರೆ ನಾವು ಪರಿಪೂರ್ಣತೆಯನ್ನು ಹೊಂದಿದವರಾಗಬಹುದಾಗಿತ್ತು. ಆದರೆ ಅದು ಸುಲಭಸಾಧ್ಯವಲ್ಲ. ಇದಲ್ಲದೆ, ನಾವು ಹೆಚ್ಚು ಹೆಚ್ಚು ಶಾಂತಚಿತ್ತರೂ ಸಮಾಧಾನಿಗಳೂ ಆದ ಹಾಗೆಲ್ಲ ನಾವು ಹೆಚ್ಚು ಹೆಚ್ಚು ಪ್ರೇಮಮಯರಾಗುತ್ತೇವೆ. ನಾವು ಮಾಡುವ ಕಾರ್ಯವೂ ಚೆನ್ನಾಗಿ ಆಗುವುದು.

# ಅನಾಸಕ್ತಿ ಯೋಗ

ಅನಾಸಕ್ತಿಯೆಂದರೆ ಸಂಪೂರ್ಣ ಆತ್ಮಸಮರ್ಪಣೆ. ನಮ್ಮಿಂದ ಪ್ರವೃತ್ತವಾದ ಪ್ರತಿಯೊಂದು ಕ್ರಿಯೆಯು ನಮಗೆ ನಿಲುಕುವಂತೆ, ನಮ್ಮ ಕರ್ಮಗಳು ಅನ್ಯರ ಮೇಲೆಯೂ ಅನ್ಯರ ಕರ್ಮಗಳು ನಮ್ಮ ಮೇಲೆಯೂ ಪ್ರತಿಕ್ರಿಯೆಯನ್ನುಂಟುಮಾಡುತ್ತವೆ. ದುಷ್ಟ ಕೆಲಸಗಳನ್ನು ಮಾಡಿದವರು ಹೆಚ್ಚು ಹೆಚ್ಚು ದುಷ್ಟರಾಗುವರೆಂಬುದೂ ಒಳ್ಳೇ ಕೆಲಸಗಳನ್ನು ಮಾಡಿದವರು ಹೆಚ್ಚು ಹೆಚ್ಚು ತೇಜಸ್ವಿಗಳಾಗಿ ಯಾವಾಗಲೂ ಒಳ್ಳೇ ಕೆಲಸಗಳನ್ನೇ ಮಾಡಬಯಸುವರೆಂಬುದೂ ಪ್ರಾಯಃ ನಾವೆಲ್ಲರೂ ವ್ಯವಹಾರದಲ್ಲಿ ಕಾಣುವ ಸಂಗತಿ. ಹೀಗೆ ಒಬ್ಬರೊಬ್ಬರ ಕ್ರಿಯೆ ಪ್ರತಿಕ್ರಿಯೆಗಳ ಪರಿಣಾಮವನ್ನು ನಾವು ಒಪ್ಪಿಕೊಳ್ಳದಿದ್ದರೆ ಕರ್ಮಪ್ರಭಾವದ ಹೆಚ್ಚಳದ ಇತ್ಯರ್ಥವನ್ನೇ

ಮಾಡಲಿಕ್ಕೆ ಬರಲಿಕ್ಕಿಲ್ಲ. ಭೌತಿಕಶಾಸ್ತ್ರದ ಒಂದು ಉದಾಹರಣೆಯಿಂದ ಈ ವಿಷಯವು ಸ್ಪಷ್ಟವಾಗುವುದು. ನಾನು ಒಂದು ಕೆಲಸದಲ್ಲಿ ತೊಡಗಿದಾಗ ನನ್ನ ಮನೋಸಾಗರದಲ್ಲಿ ಒಂದು ತರದ ತರಂಗಗಳು ಅಥವಾ ಹೊಯ್ದಾಟಗಳು ಹುಟ್ಟುತ್ತವೆ. ಅಂತಹದೇ ಪರಿಸ್ಥಿತಿಯಲ್ಲಿದ್ದ ಮನಸ್ಸುಗಳ ಮೇಲೆಲ್ಲ ಅದೇ ರೀತಿ ಪರಿಣಾಮವಾಗುವುದು. ಒಂದೇ ಸ್ವರಕ್ಕೆ ಹೊಂದಿಸಿದ ಭಿನ್ನ ಭಿನ್ನ ವಾದ್ಯಗಳನ್ನು ಒಂದು ಕೋಣೆಯಲ್ಲಿಟ್ಟು ಒಂದನ್ನು ಬಾರಿಸಿದರೆ ಉಳಿದೆಲ್ಲ ವಾದ್ಯಗಳು ತದನುರೂಪ ಹೊಯ್ದಾಟವನ್ನು ಹೊಂದಿ ಅದೇ ಸ್ವರವನ್ನು ಹೊರಡಿಸುತ್ತವೆಂಬುದನ್ನು ನೀವೆಲ್ಲರೂ ನೋಡಿರಬಹುದು. ಅದರಂತೆ ಒಂದೇ ಸ್ಥಿತಿಯಲ್ಲಿದ್ದ ಮನಸ್ಸುಗಳೆಲ್ಲವೂ ಒಂದೇ ವಿಚಾರದಿಂದ ಅಲ್ಲಾಡಿಸಲ್ಪಡುತ್ತವೆ. ಅರ್ಥಾತ್, ಈ ರೀತಿಯಾಗಿ ಒಂದು ವಿಚಾರದ ಪ್ರಭಾವವು ಉಳಿದ ಮನಸ್ಸುಗಳ ಮೇಲೆ, ಅವುಗಳ ನಡುವಿನ ಅಂತರ ಮೊದಲಾದ ಕಾರಣಗಳಿಂದ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಪರಿಣಾಮ ಮಾಡಬಹುದು. ಆದರೆ ಮನಸ್ಸು ಮಾತ್ರ ಈ ರೀತಿಯ ಹೊರಗಿನ ವಿಚಾರಗಳ ಆಘಾತಕ್ಕೆ ಒಳಗಾಗುವುದೆಂಬ ಮಾತು ನಿಜವಿದೆ. ನಾನೊಂದು ಕೆಟ್ಟ ಕೆಲಸವನ್ನು ಮಾಡುತ್ತಿದ್ದಾಗ ನನ್ನ ಮನಸ್ಸಿನಲ್ಲಿ ಕೆಲವು ತರಂಗಗಳು ಹುಟ್ಟುತ್ತವೆ. ಈ ತರಂಗಗಳು ಹಬ್ಬಿ ಅದೇ ಪರಿಸ್ಥಿತಿಯಲ್ಲಿದ್ದ ಇತರ ಮನಸ್ಸುಗಳಿಗೆ ಬಡೆದು ಪರಿಣಾಮವನ್ನುಂಟುಮಾಡುತ್ತದೆ. ನಾನೊಂದು ಒಳ್ಳೇ ಕಾರ್ಯದಲ್ಲಿ ತೊಡಗಿದಾಗ ಬೇರೆ ತರದ ತರಂಗಗಳು ನನ್ನ ಮನಸ್ಸಿನಲ್ಲಿ ಹುಟ್ಟುತ್ತವೆ. ಆಗ ಕೂಡ ಅದೇ ಪರಿಸ್ಥಿತಿಯಲ್ಲಿದ್ದ ಮನಸ್ಸುಗಳಿಗೆ ಈ ಚನ್ನಾದ ತರಂಗಗಳು ತಾಕಿ ಪರಿಣಾಮವನ್ನುಂಟುಮಾಡುತ್ತವೆ. ಹೀಗೆ ಒಂದು ಮನಸ್ಸಿನ ಮೇಲೆ ಮತ್ತೊಂದು ಮನಸ್ಸಿನಿಂದ ಆಗುವ ಪರಿಣಾಮವು ಅದರದರ ಆಕರ್ಷಣ ಶಕ್ತಿಯ ಪ್ರಕಾರ ಹೆಚ್ಚು ಕಡಿಮೆಯಾಗುತ್ತದೆ.

ಪ್ರಕಾಶದ ತರಂಗಗಳು ಹೊರಹೊರಟು ದೂರದ ಒಂದು ಪದಾರ್ಥವನ್ನು ಮುಟ್ಟಬೇಕಾದರೆ ಲಕ್ಷಾವಧಿ ವರ್ಷಗಳು ಬೇಕಾಗುವಂತೆ ವಿಚಾರ ತರಂಗಗಳು ಹೊರಹೊರಟು ತನ್ನ ಕೂಡ ಏಕತಾನ ಹೊಂದುವ ಅಥವಾ ಸ್ವರಗೂಡುವ ಮತ್ತೊಂದು ಪದಾರ್ಥವನ್ನು ಮುಟ್ಟಬೇಕಾದರೂ ನೂರಾರು ವರ್ಷಗಳು ಬೇಕಾಗಬಹುದು. ಆದ್ದರಿಂದ ಈ ನಮ್ಮ ವಾತಾವರಣವು ಇಂಥ ಒಳ್ಳೇ ಅಥವಾ ಕೆಡುಕು ವಿಚಾರತರಂಗಗಳಿಂದ ತುಂಬಿರುತ್ತದೆ.

ಪ್ರತಿಯೊಂದು ಮಿದುಳಿನಿಂದ ಹೊರಬಿದ್ದ ಪ್ರತಿಯೊಂದು ವಿಚಾರವು ತರಂಗ ರೂಪದಿಂದ ಸಾಗುತ್ತ ಸಾಗುತ್ತ ಅದಕ್ಕೆ ಯೋಗ್ಯಪಾತ್ರವಾದ ಮತ್ತೊಂದು ಪದಾರ್ಥವು ದೊರಕುವ ತನಕ ಹೋಗುತ್ತದೆ. ಈ ತರಂಗಗಳನ್ನು ಸ್ವೀಕರಿಸಲು ಯೋಗ್ಯ ಭೂಮಿಕೆಯುಳ್ಳ ಯಾವುದಾದರೊಂದು ಮನಸ್ಸು ಕೂಡಲೇ ಅವುಗಳನ್ನು ಸ್ವೀಕರಿಸುವುದು. ಒಬ್ಬ ಮನುಷ್ಯನು ಕೆಟ್ಟ ಕಾರ್ಯ ಗಳನ್ನು ಮಾಡುತ್ತಿರುವಾಗ ಅವನ ಮನಸ್ಸು ಒಂದು ವಿಶಿಷ್ಟ ಸ್ಥಿತಿಯನ್ನು ಹೊಂದುತ್ತದೆ. ಈ ಸ್ಥಿತಿಗೆ ಅನುರೂಪವಾದಂಥ ಮತ್ತು ಮೊದಲೇ ವಾತಾ ವರಣದಲ್ಲಿದ್ದಂಥ ಎಲ್ಲ ವಿಚಾರತರಂಗಗಳೂ ಅವನ ಮನಸ್ಸನ್ನು ಪ್ರವೇಶಿ ಸಲು ಯತ್ನಿಸುವವು. ಆದ್ದರಿಂದಲೇ ದುರಾಚಾರಿ ಹೆಚ್ಚು ಹೆಚ್ಚು ದುಷ್ಟ ಕೃತ್ಯಗಳನ್ನು ಮಾಡುತ್ತ ಹೋಗುವನು. ಅವನ ಕೃತಿಗಳು ಇಮ್ಮಡಿ ಬಲ ಗೊಳ್ಳುವವು. ಸತ್ಕಾರ್ಯಪ್ರವೃತ್ತನಾದವನ ಸ್ಥಿತಿಯೂ ಹೀಗೆಯೇ. ವಾತಾ ವರಣದಲ್ಲಿದ್ದ ಎಲ್ಲ ಸದ್ವಿಚಾರತರಂಗಗಳು ಅವನನ್ನು ಸೇರಿಕೊಳ್ಳುವವು. ಮತ್ತು ಅವನ ಸತ್ಕಾರ್ಯಗಳಿಗೆ ಇಮ್ಮಡಿ ಬಲಬರುವುದು. ಆದ್ದರಿಂದ ಕೆಡುಕು ಮಾಡುವುದರಿಂದ ಎರಡು ಬಗೆಯ ಕೇಡಾಗುವುದು. ಮೊದಲನೇ ದೆಂದರೆ, ವಾತಾವರಣದಲ್ಲಿದ್ದ ಎಲ್ಲ ದುಷ್ಟತರಂಗಗಳ ದವಡೆಯಲ್ಲಿ ನಾವು ಸಿಗುವೆವು. ಎರಡನೇದೆಂದರೆ, ದುಷ್ಟಕಾರ್ಯ ಮಾಡುವುದರಿಂದ ಅನ್ಯರ ಮೇಲೆ ನೂರಾರು ವರ್ಷಗಳ ಮೇಲಾದರೂ ಅನಿಷ್ಟ ಪರಿಣಾಮವಾಗುವುದು. ಕೆಡುಕು ಮಾಡುವುದರಿಂದ ನಮಗೂ ಕೇಡು, ಅನ್ಯರಿಗೂ ಕೇಡು. ಒಳ್ಳೇ ಕಾರ್ಯ ಮಾಡುವುದರಿಂದ ನಮಗೂ ಒಳ್ಳೇದು, ಪರರಿಗೂ ಒಳ್ಳೇದು. ಇದಲ್ಲದೆ ಮನುಷ್ಯನಲ್ಲಿರುವ ಇತರ ಶಕ್ತಿಗಳಂತೆ ಈ ಒಳಿತು ಕೆಡುಕು ಶಕ್ತಿ ಗಳೂ ಹೊರಗಿನ ವಾತಾವರಣದಿಂದ ಪುಷ್ಟಿಹೊಂದುತ್ತವೆ.

ಕರ್ಮಯೋಗದ ಮೇರೆಗೆ ಯಾವ ಕಾರ್ಯವೂ ತಕ್ಕ ಫಲವನ್ನು ಹೊಂದುವತನಕ ನಾಶವಾಗುವುದಿಲ್ಲ. ಸೃಷ್ಟಿಯೊಳಗಿನ ಯಾವ ಶಕ್ತಿಯೂ ಈ ಕರ್ಮಫಲವನ್ನು ಹೋಗಲಾಡಿಸಲಾರದು. ನಾನು ಒಂದು ಕೆಟ್ಟ ಕಾರ್ಯವನ್ನು ಮಾಡಿದರೆ ಅದರ ಪರಿಣಾಮವನ್ನು ನಾನು ಅನುಭೋಗಿ ಸಲೇ ಬೇಕು. ಅದನ್ನು ತಡೆಯುವ ಶಕ್ತಿ ಈ ಪ್ರಪಂಚದಲ್ಲಿ ಯಾರಿಗೂ ಇಲ್ಲ. ಅದೇ ಮೇರೆಗೆ ನಾನು ಒಂದು ಒಳ್ಳೇ ಕಾರ್ಯವನ್ನು ಮಾಡಿದರೆ, ಅದರ ಒಳ್ಳೇ ಫಲಗಳನ್ನು ತಡೆದುಹಿಡಿಯಲು, ಇಲ್ಲದಂತಾಗಿಸಲು, ಈ

ನಾವು ಸೋತರೆ ನಮ್ಮ ಜೀವನವೇ ಕೊನೆಗಾಣುವುದು. ಉದಾಹರಣೆಗೆ, ಜೀವನವೆಂದರೆ ಆಹಾರ ಮತ್ತು ವಾಯುವಿನ ಸಲುವಾಗಿ ನಡೆಯಿಸಿದ ಒಂದು ನಿರಂತರವಾದ ಚಟುವಟಿಕೆ. ಆಹಾರವಾಗಲಿ, ವಾಯುವಾಗಲಿ ದೊರಕದಿದ್ದರೆ ನಾವು ಸಾಯುತ್ತೇವೆ. ಜೀವನವು ಸುಲಭವಾಗಿ ತೊಂದರೆಯಿಲ್ಲದೆ ಹರಿದುಹೋಗುವ ಪ್ರವಾಹವಲ್ಲ. ಅಂತರಾತ್ಮನಿಗೂ ಬಾಹ್ಯಸೃಷ್ಟಿಗೂ ಮಧ್ಯದಲ್ಲಿ ನಡೆದ ಒಂದು ವಿಲಕ್ಷಣ ಕದನಕ್ಕೆ ಜೀವನವೆನ್ನುತ್ತೇವೆ. ಆದ್ದರಿಂದ ಈ ಕದನ ಅಥವಾ ಚಟುವಟಿಕೆ ನಿಂತ ಕೂಡಲೇ, ಜೀವನಕ್ರಮವೇ ನಿಂತಹಾಗಾಯಿತು.

ಈ ಹೋರಾಟದ ನಿಲ್ಲುವಿಕೆಯೇ ಶ್ರೇಷ್ಠ ಸುಖ. ಆದರೆ ಆಗ ಜೀವನಕ್ರಿಯೆಯೇ ನಿಂತುಹೋಗುವುದು. ಏಕೆಂದರೆ ಜೀವನಕ್ರಿಯೆ ನಿಂತಾಗಲೇ ಈ ಹೋರಾಟವು ನಿಲ್ಲುವುದು ಸಾಧ್ಯ. ಪರೋಪಕಾರವನ್ನು ಮಾಡುತ್ತಿದ್ದೇವೆಂದು ಹೇಳುತ್ತಿರುವಾಗ ನಿಜವಾಗಿ ನಮ್ಮ ಉಪಕಾರವನ್ನೇ ಸ್ವಹಿತವನ್ನೇ ಸಾಧಿಸಿಕೊಳ್ಳುತ್ತಿರುವೆವೆಂಬುದನ್ನು ನಾವು ಈ ಮೊದಲೇ ತಿಳಿದಿದ್ದೇವೆ. ಪರರಿಗಾಗಿ ಮಾಡಿದ ಕಾರ್ಯದಿಂದ ನಮ್ಮ ಆತ್ಮಶುದ್ಧೀಕರಣವಾಗುವುದೇ ಬಹು ಮುಖ್ಯವಾದ ಫಲಿತಾಂಶ. ಸತತವಾಗಿ ಪರರ ಕಲ್ಯಾಣವನ್ನು ಬಗೆಯುವುದರಿಂದ ನಮ್ಮನ್ನು ನಾವು ಮರೆಯುತ್ತೇವೆ. ಈ ಸ್ವಾರ್ಥವಿಸ್ಮರಣೆಯೇ ನಾವು ಜನ್ಮದಲ್ಲಿ ಕಲಿಯತಕ್ಕ ಮಹತ್ವದ ಪಾಠ. ಮನುಷ್ಯನು ತನ್ನನ್ನು ತಾನೇ ಸುಖಿಯಾಗಿ ಮಾಡಬಲ್ಲನೆಂದು ಮೂರ್ಖತನದಿಂದ ತಿಳಿದುಕೊಳ್ಳುತ್ತಾನೆ. ಆದರೆ ಅನೇಕ ವರ್ಷಗಳ ಹೋರಾಟದ ಅನುಭವದಿಂದ, ನಿಜವಾದ ಸುಖವು ಸ್ವಾರ್ಥವನ್ನು ಕೊಲ್ಲುವುದರಿಂದ ದೊರಕುವುದೆಂದೂ ತನ್ನನ್ನು ಸುಖಿಯಾಗಿ ಮಾಡಿಕೊಳ್ಳುವುದು ತನ್ನ ಕೈಯಲ್ಲಿರುವುದೆಂದೂ, ಕೊನೆಗೆ ತಿಳಿದುಬರುತ್ತದೆ. ಉದಾರಬುದ್ಧಿ ಪ್ರೇರಿತವಾದ ಪ್ರತಿಯೊಂದು ಕಾರ್ಯವೂ ಪ್ರತಿಯೊಂದು ಸಹಾನುಭೂತಿಪರ ವಿಚಾರವೂ ಪರಸಹಾಯಕ್ಕಾಗಿ ಮಾಡಿದ ಪ್ರತಿಯೊಂದು ಕಾರ್ಯವೂ ಪ್ರತಿಯೊಂದು ಸದಾಚಾರವೂ ಅಷ್ಟಷ್ಟು ನಮ್ಮ ಸ್ವಾರ್ಥ ಬುದ್ಧಿಯನ್ನೂ ಸ್ವಾಭಿಮಾನವನ್ನೂ ಕಿತ್ತಿಹಾಕಿ ವಿನಯವನ್ನೂ ನಮ್ರತೆಯನ್ನೂ ಕಲಿಸುತ್ತವೆ. ಆದ್ದರಿಂದ ಅವೆಲ್ಲ ಕಲ್ಯಾಣಕಾರಕಗಳು. ಆದ್ದರಿಂದ ಜ್ಞಾನ, ಭಕ್ತಿ, ಕರ್ಮಗಳೆಲ್ಲ ಒಂದೇ ಸ್ಥಿತಿಗೆ ತಂದು ಮುಟ್ಟಿಸುತ್ತವೆ. ಶಾಶ್ವತವಾದ ಸಂಪೂರ್ಣ ಆತ್ಮವಿಸ್ಮರಣೆಯೇ

ಅತ್ಯುಚ್ಚವಾದ ಧ್ಯೇಯ. ಅಲ್ಲಿ ‘ ನಾನು ’ ಎನ್ನುವಂತಹ ಯಾವುದೂ ಇರುವುದಿಲ್ಲ; ಇರುವುದೆಲ್ಲ ‘ ನೀನು. ’ ಮನುಷ್ಯನಿಗೆ ತಿಳಿದಾಗಲಿ ತಿಳಿಯದೆ ಆಗಲಿ ಕರ್ಮಯೋಗವು ಅವನನ್ನು ಅದೇ ಸ್ಥಿತಿಗೆ ಒಯ್ಯುತ್ತದೆ. ದೇವರು ನಿರ್ಗುಣಿಯೂ ನಿರಾಕಾರಿಯೂ ಎಂದು ಹೇಳಿದರೆ ಧರ್ಮೋಪದೇಶಕನು ಗಾಬರಿಯಾಗಬಹುದು. ಸಗುಣನೂ ಸಾಕಾರಿಯೂ ಆದ ದೇವರೇ ನಿಜ ವೆಂದು ಆಗ್ರಹಪಡಬಹುದು. ಜೀವೇಶಭೇದವು ಅವಶ್ಯವೆಂದು ವಾದಿಸ ಬಹುದು. ಆದರೆ ಅವನ ನೀತಿಯ ಕಲ್ಪನೆಗಳೆಲ್ಲ ಈ ಉಚ್ಚ ಸ್ವಾರ್ಥ ತ್ಯಾಗವನ್ನೇ, ಆತ್ಮವಿಸ್ಮರಣೆಯನ್ನೇ ಹೊಂದಿಕೊಂಡಿರುತ್ತವೆ. ಸರ್ವ ನೀತಿಯ ಮೂಲಾಧಾರವೂ ಅದೇ. ಅದು ಮನುಷ್ಯ ವಿಷಯಕವೇ ಇರಲಿ, ಪಶುಪಕ್ಷಿಗಳ ವಿಷಯಕವೇ ಇರಲಿ, ದೇವತೆಗಳ ವಿಷಯಕವೇ ಇರಲಿ, ಎಲ್ಲರ ನೀತಿಪದ್ಧತಿಗಳಿಗೂ ಅದೇ ತಳಹದಿಯಾದ ಮೂಲತತ್ವ.

ಈ ಜಗತ್ತಿನಲ್ಲಿ ನೀವು ಅನೇಕ ತರದ ಜನರನ್ನು ಕಾಣಬಹುದು. ಮೊದಲನೆಯವರೆಂದರೆ ದೈವೀ ವರಪುರುಷರು. ಅವರ ಆತ್ಮವಿಸ್ಮರಣೆ ಸಂಪೂರ್ಣವಾಗಿರುತ್ತದೆ. ಅವರು ತಮ್ಮ ಜೀವಗಳ ಆಹುತಿಯಿಂದಾದರೂ ಪರರಿಗೆ ಕಲ್ಯಾಣವನ್ನು ಬಗೆಯುವರು. ಅವರು ಮಾನವ ಶ್ರೇಷ್ಠರು. ಇಂಥ ನೂರು ಜನರು ಇರುವ ಯಾವ ದೇಶವೂ ಹತಾಶವಾಗುವ ಕಾರಣ ವಿಲ್ಲ. ಆದರೆ ದುರ್ದೈವದಿಂದ ಅಂಥವರು ತೀರ ವಿರಳ. ಎರಡನೆಯವ ರೆಂದರೆ, ತಮ್ಮ ಸ್ವಾರ್ಥಕ್ಕೆ ಅಪಾಯವಾಗದಂತೆ ಪರಹಿತವನ್ನು ಬಗೆ ಯುವ ಸಜ್ಜನರು. ಮೂರನೆಯವರೆಂದರೆ ಪರರಿಗೆ ಅಕಲ್ಯಾಣವನ್ನು ಬಗೆದಾದರೂ ಸ್ವಾರ್ಥವನ್ನು ಸಾಧಿಸಿಕೊಳ್ಳುವವರು. ಹೆಸರಿಡಲು ಬಾರ ದಂಥ ನಾಲ್ಕನೇದೊಂದು ವರ್ಗವಿರುವುದೆಂದು ಒಬ್ಬ ಸಂಸ್ಕೃತ ಕವಿ ಹೇಳು ತ್ತಾನೆ. ತಮ್ಮ ಸ್ವಾರ್ಥವೇನೂ ಇಲ್ಲದಿದ್ದರೂ ಸುಮ್ಮನೆ ಪರಹಿತವನ್ನು ಕೆಡಿಸುವವರಿವರು. ಪ್ರಪಂಚದಲ್ಲಿ ಪರಹಿತವನ್ನು ಬಗೆಯುವ ಸತ್ಪುರು ಷರು ಒಂದು ಬದಿಗೆ ಇರುವಂತೆ ಪರಪೀಡೆಗಾಗಿಯೇ ಪರಪೀಡೆಯನ್ನು ಬಗೆಯುವ ನೀಚರು ಮತ್ತೊಂದು ಬದಿಗೆ ಕಾಣಬರುತ್ತಾರೆ. ಅವರಿಗೆ ಅದರಿಂದ ಏನೂ ಲಾಭವಿಲ್ಲ. ದುಷ್ಕರ್ಮವನ್ನು ಮಾಡುವುದೇ ಅವರ ಸ್ವಭಾವ.

ಪ್ರವೃತ್ತಿ ನಿವೃತ್ತಿಗಳೆಂದು ಎರಡು ಮಾರ್ಗಗಳಿರುವವು. ಪ್ರವೃತ್ತಿ

ಯೆಂದರೆ ಮುಂದುವರಿಯುವಿಕೆ. ನಿವೃತ್ತಿಯೆಂದರೆ ಹಿಂದಿರುಗುವಿಕೆ. ನಾನು ನನ್ನದೆಂಬ ಪ್ರಪಂಚವೇ ಪ್ರವೃತ್ತಿ. 'ನಾನು' ಎಂಬುದಕ್ಕೆ ಧನಧಾನ್ಯ, ಶಕ್ತಿಸಾಮರ್ಥ್ಯ, ಹೆಸರು ಕೀರ್ತಿ ಮೊದಲಾದವುಗಳನ್ನು ಒದಗಿಸಿ ಕೊಡುವ ಎಲ್ಲ ಪದಾರ್ಥಗಳೂ ಪ್ರವೃತ್ತಿಯಲ್ಲಿ ಸಮಾವೇಶವಾಗುವವು. 'ನನ್ನ'ನ್ನೇ ಕೇಂದ್ರವನ್ನಾಗಿಟ್ಟುಕೊಂಡು ಈ ಕೇಂದ್ರದ ಸುತ್ತಲು ಎಲ್ಲ ವೈಭವಸಂಪತ್ತನ್ನು ಒಟ್ಟುಗೂಡಿಸುವುದು ಪ್ರವೃತ್ತಿ. ಈ ಪ್ರವೃತ್ತಿಯ ಕಡೆಗೆ ಎಲ್ಲೆಡೆಯಿಂದಲೂ ಎಲ್ಲವನ್ನೂ ಒಟ್ಟುಗೂಡಿಸಿ ಬಳೆದುಕೊಂಡು ತನಗೆ ಅತ್ಯಂತ ಪ್ರಿಯವಾದ ಸ್ವಾರ್ಥದ ಸುತ್ತಲೂ ರಾಶಿಯನ್ನು ಹಾಕಿಕೊಳ್ಳುವುದೇ ಪ್ರತಿಯೊಬ್ಬ ಮನುಷ್ಯನ ಮನಸ್ಸಿನ ಸ್ವಾಭಾವಿಕ ಒಲವು. ಈ ಒಲವು ಅಥವಾ ಪ್ರವೃತ್ತಿಯು ಅಳಿದು ನಿವೃತ್ತಿ ಅಥವಾ ಹಿಂತಿರುಗೋಣವು ಆರಂಭವಾದಾಗ ನೀತಿ ಧರ್ಮಗಳ ಉದಯವಾಗುವುದು. ಪ್ರವೃತ್ತಿನಿವೃತ್ತಿಗಳೆರಡೂ ಕರ್ಮಪರವಾಗಿರುತ್ತವೆ. ಮೊದಲನೆಯದು ದುಷ್ಕರ್ಮಪರ; ಎರಡನೆಯದು ಸತ್ಕರ್ಮಪರ. ಈ ನಿವೃತ್ತಿಯೇ ಎಲ್ಲ ನೀತಿಧರ್ಮಗಳ ಮೂಲಾಧಾರ. ಅದರ ಪೂರ್ಣತೆಗೇ ಸಂಪೂರ್ಣ ಸ್ವಾರ್ಥತ್ಯಾಗ, ಪರಹಿತಕ್ಕಾಗಿ ತನುಮನಧನಗಳನ್ನು ಸೂರೆಮಾಡಿ ಆತ್ಮಯಜ್ಞವನ್ನು ಮಾಡುವ ಸಿದ್ಧತೆ ಎನ್ನುತ್ತಾರೆ. ಮನುಷ್ಯನು ಈ ಸ್ಥಿತಿಯನ್ನು ಮುಟ್ಟಿದಾಗ ಅವನು ಕರ್ಮಯೋಗದಲ್ಲಿ ಪರಿಪೂರ್ಣತೆಯನ್ನು ಹೊಂದಿದಂತಾಗುವುದು. ಸತ್ಕರ್ಮಗಳ ಅಥವಾ ಸದಾಚಾರದ ಶ್ರೇಷ್ಠ ಫಲವು ಇದೇ. ಮನುಷ್ಯನು ಯಾವ ದರ್ಶನವನ್ನೂ ಯಾವ ಮತಸಿದ್ಧಾಂತವನ್ನೂ ಓದಿಕೊಂಡಿರದಿದ್ದರೂ ಯಾವ ದೇವರಲ್ಲಿಯೂ ಅವನಿಗೆ ಶ್ರದ್ಧೆ ವಿಶ್ವಾಸಗಳಿರದಿದ್ದರೂ ಇಡೀ ಆಯುಷ್ಯದಲ್ಲಿ ಅವನು ಒಮ್ಮೆ ಕೂಡ ಈಶ್ವರನನ್ನು ಪ್ರಾರ್ಥಿಸದಿದ್ದರೂ ಅಡ್ಡಿಯಿಲ್ಲ; ಸತ್ಕರ್ಮಗಳ ಪ್ರಭಾವದಿಂದ ಪರರಿಗಾಗಿ ತನ್ನ ಆಸ್ತಿ ಸ್ವತ್ತುಗಳನ್ನೂ ತನ್ನ ಜನ್ಮವನ್ನೂ ಧಾರೆಯೆರೆಯುವ ಸಾಮರ್ಥ್ಯವು ಉಂಟಾಗಿದ್ದರೆ ಸಾಕು. ಇಂಥವನೂ ಧಾರ್ಮಿಕ ಮನುಷ್ಯನೇ. ಸ್ತೋತ್ರ ಪ್ರಾರ್ಥನೆಗಳಿಂದಲೂ, ತತ್ವಜ್ಞಾನಿಯು ತನ್ನ ಜ್ಞಾನದಿಂದಲೂ, ಮುಟ್ಟುವ ಸ್ಥಿತಿಯನ್ನೇ ಇವನು ಮುಟ್ಟುವನು. ಆದ್ದರಿಂದ ತತ್ವಜ್ಞಾನಿ ಕರ್ಮಯೋಗಿ ಭಕ್ತಿಯೋಗಿ ಇವರೆಲ್ಲರೂ ಸ್ವಾರ್ಥತ್ಯಾಗವೆಂಬ ಒಂದೇ ಒಂದು ಧ್ಯೇಯವನ್ನೆ ಮುಟ್ಟುತ್ತಾರೆ. ಪರರಿಗಾಗಿ ಆತ್ಮ

ಯಜ್ಞವನ್ನು ಮಾಡಲು ಸಿದ್ಧನಾದಂಥ ಮನುಷ್ಯನೆದುರಿಗೆ ಭಿನ್ನ ಭಿನ್ನ ಮತದವರು ಭಿನ್ನ ಧರ್ಮದವರು ಎಲ್ಲರೂ ಭಯಭಕ್ತಿಯಿಂದ ಆದರ ಪೂರ್ವಕವಾಗಿ ನಿಲ್ಲಬೇಕಾಗುವುದು. ಇಲ್ಲಿ ಭಿನ್ನ ಮತಪಂಥಗಳ ವಿಚಾರ ವಿಲ್ಲ. ಧರ್ಮದ ಕಲ್ಪನೆಯನ್ನೇ ವಿರೋಧಿಸುವಂಥ ಧರ್ಮಲಂಡರು ಕೂಡ ಈ ಸಂಪೂರ್ಣ ಆತ್ಮಯಜ್ಞದ ಕೃತಿಯನ್ನು ಕಂಡಾಗ ಅದನ್ನೂ ಆದರಿಸಬೇಕೆಂದು ಬಯಸುತ್ತಾರೆ. ಬುದ್ಧನು ನಾಸ್ತಿಕವಾದವನ್ನು ಉಪ ದೇಶಿಸಿದ್ದರೂ ಆತ್ಮಯಜ್ಞವನ್ನೇ ಸ್ಪಷ್ಟವಾಗಿ ಪ್ರಸಾರಮಾಡಿದ್ದರಿಂದ, ಅತಿಶಯ ಸಂಕುಚಿತ ದೃಷ್ಟಿಯ ಧರ್ಮಮೂಢನಾದ ಕ್ರೈಸ್ತನು ಕೂಡ ಬುದ್ಧನ ವಿಷಯದಲ್ಲಿ ಆದರಭಾವವನ್ನು ತಾಳುತ್ತಾನೆ. ಸಾಧನಗಳು ಭಿನ್ನ ವಾಗಿದ್ದರೂ ಧ್ಯೇಯವು ಒಂದೇ ಎಂಬುದನ್ನು ಈ ಸಂಕುಚಿತ ದೃಷ್ಟಿಯ ಧರ್ಮಮೂಢನು ತಿಳಿದುಕೊಂಡಿಲ್ಲ. ದೇವರ ವಿಚಾರವನ್ನು ಕಣ್ಣೆದುರಿಗೆ ನಿರಂತರವಾಗಿ ಇಟ್ಟುಕೊಂಡ ಉಪಾಸಕರು ಕಟ್ಟಕಡೆಗೆ ಅದೇ ಸ್ಥಿತಿಗೆ ಮುಟ್ಟುತ್ತಾರೆ. 'ಎಲ್ಲರೂ ನಿನ್ನ ಇಚ್ಛೆಯಂತೆ ನಡೆಯುತ್ತಾರೆ; ಮತ್ತು ನಡೆಯಲಿ' ಎಂಬ ತಿಳಿವಳಿಕೆಯಿಂದ ತನಗಾಗಿ ಅವನೇನೂ ಇಟ್ಟು ಕೊಳ್ಳುವುದಿಲ್ಲ. ಇದೇ ಸ್ವಾರ್ಥಯಜ್ಞ. ಜ್ಞಾನಿಯು ತಾನೆಂಬ ಅಹಂಕಾರ ವನ್ನು ಮಾಯೆಯೆಂದು ತಿಳಿದುಕೊಂಡು ಅದನ್ನು ಕೂಡಲೇ ಬಿಟ್ಟುಬಿಡು ತ್ತಾನೆ. ಇದು ಸ್ವಾರ್ಥಯಜ್ಞ. ಹೀಗೆ ಕರ್ಮ, ಭಕ್ತಿ, ಜ್ಞಾನಗಳೆಲ್ಲ ಕೊನೆಗೆ ಒಂದೆಡೆಯಲ್ಲಿ ಕೂಡಿಕೊಳ್ಳುತ್ತವೆ. ಜಗತ್ತು ದೇವರಲ್ಲವೆಂದು ನಮ್ಮ ಪೂರ್ವಜರು ಹೇಳಿದ್ದು ಇದೇ ಅರ್ಥದಿಂದ. ಜಗತ್ತು ಬೇರೆ, ದೇವರು ಬೇರೆ. ಜಗತ್ತೆಂದರೆ ಸ್ವಾರ್ಥ. ಸ್ವಾರ್ಥತ್ಯಾಗವೇ ದೇವರು. ಬಂಗಾರದ ಅರಮನೆಯಲ್ಲಿ ಸಿಂಹಾಸನದ ಮೇಲೆ ಮೆರೆಯುತ್ತಿದ್ದರೂ ಒಬ್ಬ ಮನುಷ್ಯನು ಸ್ವಾರ್ಥರಹಿತನಾಗಿರಬಹುದು. ಆಗ ಅವನು ದೇವರಲ್ಲಿರುವ ನೆಂದು ತಿಳಿಯಬೇಕು. ಮತ್ತೊಬ್ಬನು ಮುರುಕು ಗುಡಿಸಲಿನಲ್ಲಿ ಹರುಕು ಚಾಪೆಯ ಮೇಲೆ ಕೂತಿರಬಹುದು. ಅವನಿಗೆ ತನ್ನದೆಂಬುದೇನೂ ಇರಲಿ ಕ್ಕಿಲ್ಲ. ಆದರೂ ಅವನು ಸ್ವಾರ್ಥಿಯಾಗಿದ್ದರೆ ಅವನು ಪ್ರಪಂಚದಲ್ಲಿ ಅತಿ ಶಯವಾಗಿ ಮುಳುಗಿರುವನೆಂದೇ ತಿಳಿಯಬೇಕು.

ಇನ್ನು, ನಮ್ಮ ಮುಖ್ಯ ವಿಷಯಕ್ಕೆ ತಿರುಗೋಣ. ಏನೂ ಕೇಡಿಲ್ಲದ ಕಲ್ಯಾಣವನ್ನೂ ಏನೂ ಕಲ್ಯಾಣವಿಲ್ಲದ ಕೇಡನ್ನೂ ಮಾಡುವುದು ಶಕ್ಯ

ವಿಲ್ಲವೆಂದು ಹಿಂದೆ ಹೇಳಿದ್ದೇವೆ. ಇದನ್ನು ತಿಳಿದ ಮೇಲೂ ಕರ್ಮವನ್ನು ಹೇಗೆ ಮಾಡಲಾದೀತು? ಆದ್ದರಿಂದ, ಕ್ರಮೇಣ ಆತ್ಮಹತ್ಯೆಯೇ ಈ ಪ್ರಪಂಚದೊಳಗಿಂದ ಪಾರಾಗಲು ಇರುವ ಒಂದೇ ಒಂದು ಉಪಾಯವೆಂದು ಕೆಲವು ಪಂಥಗಳು ಹೇಳಿವೆ. ಏಕೆಂದರೆ, ಮನುಷ್ಯನು ಬದುಕಿದ್ದರೆ ಸಣ್ಣ ಬಡ ಪ್ರಾಣಿಗಳನ್ನಾಗಲಿ ಸಸ್ಯ ವನಸ್ಪತಿಗಳನ್ನಾಗಲಿ ಕೊಲ್ಲಬೇಕಾಗುವುದು. ಯಾರಿಗೇ ಆಗಲಿ ಏತಕ್ಕಾದರೂ ಆಗಲಿ ಸ್ವಲ್ಪವಲ್ಲ ಸ್ವಲ್ಪವಾದರೂ ಅಪಾಯವನ್ನು ಬಗೆಯಲೇಬೇಕಾಗುವುದು. ಆದ್ದರಿಂದ ಈ ಸ್ವಾರ್ಥಮಯ ಜಗತ್ತಿನಿಂದ ಪಾರಾಗುವುದಕ್ಕೆ ಸಾಯುವುದೊಂದೇ ಉಪಾಯವೆಂದು ಅವರು ಹೇಳುತ್ತಾರೆ. ತಮ್ಮ ಶ್ರೇಷ್ಠವಾದ ಧ್ಯೇಯವು ಇದೇ ಎಂದು ಜೈನರು ಹೇಳಿದ್ದಾರೆ. ಈ ವಿಚಾರಸರಣೆ ಸರಿಯಾಗಿಯೂ ನ್ಯಾಯ್ಯವಾಗಿಯೂ ತೋರಬಹುದು. ಆದರೆ ನಿಜವಾದ ಮಾರ್ಗವನ್ನು ಭಗವದ್ಗೀತೆಯಲ್ಲಿ ತೋರಿಸಲಾಗಿದೆ. ಅನಾಸಕ್ತಿಯೋಗವೇ ಈ ಮಾರ್ಗ. ನಮ್ಮ ಜೀವಿತದ ಕರ್ಮವನ್ನು ಮಾಡುತ್ತಿರುವಾಗ ನಾವು ಯಾವುದರಲ್ಲಿಯೂ ಆಸಕ್ತಿಯನ್ನಿಡಬಾರದು; ಪ್ರಪಂಚದಿಂದ ನಾವು ಸಂಪೂರ್ಣವಾಗಿ ಬೇರೆಯಾಗಿರುವೆವೆಂದು ತಿಳಿದುಕೊಳ್ಳಬೇಕು. ಪ್ರಪಂಚದಲ್ಲಿ ನೀವು ಏನು ಮಾಡಿದರೂ ಅದು ನಿಮ್ಮಸಲುವಾಗಿ ಅಲ್ಲವೇ ಅಲ್ಲವೆಂದು ತಿಳಿಯಬೇಕು. ಸ್ವಾರ್ಥಕ್ಕಾಗಿ ಮಾಡಿದ ಕರ್ಮಗಳೆಲ್ಲವೂ ನಿಮ್ಮ ಮೇಲೆ ದೀರ್ಘ ಸಂಸ್ಕಾರವನ್ನುಂಟುಮಾಡಿ ತಮ್ಮ ಫಲಗಳನ್ನು ಕೊಡದೆ ಹೋಗಲಾರವು. ಸತ್ಕರ್ಮವನ್ನು ಮಾಡಿದರೆ ಸತ್ಫಲಗಳನ್ನು ಉಣ್ಣಬೇಕಾಗುವುದು. ದುಷ್ಕರ್ಮಗಳನ್ನು ಮಾಡಿದರೆ ದುಷ್ಫಲಗಳನ್ನು ಉಣ್ಣಬೇಕಾಗುವುದು. ಆದರೆ ಯಾವ ಕೆಲಸವನ್ನೂ ನಿಮ್ಮ ಸ್ವಂತದ ಸಲುವಾಗಿ ಮಾಡದಿದ್ದರೆ, ನಿಮ್ಮ ಮೇಲೆ ಏನೂ ಸಂಸ್ಕಾರವು ಆಗಲಾರದು. ಇದೇ ವಿಚಾರವನ್ನೊಳಗೊಂಡ ಒಂದು ಅರ್ಥಗರ್ಭಿತ ಶ್ಲೋಕವು ನಮ್ಮ ಶಾಸ್ತ್ರಗ್ರಂಥಗಳಲ್ಲಿ ದೊರಕುತ್ತದೆ. ತಾನು ಇಡೀ ಜಗತ್ತನ್ನು ಕೊಂದರೂ, ತಾನೇ ಕೊಲ್ಲಲ್ಪಟ್ಟರೂ, ತಾನು ಕರ್ಮವನ್ನು ಮಾಡುತ್ತಿರುವುದು ತನಗಾಗಿ ಅಲ್ಲವೆಂಬುದನ್ನು ಚನ್ನಾಗಿ ಅರಿತಿದ್ದರೆ ಅವನು ಕೊಲ್ಲುವುದೂ ಇಲ್ಲ, ಕೊಲ್ಲಲ್ಪಡುವುದೂ ಇಲ್ಲ. ಆದ್ದರಿಂದ ಕರ್ಮಯೋಗವು ಇದನ್ನೇ ಹೇಳುವುದು—"ಜಗತ್ತನ್ನೂ ಪ್ರಪಂಚವನ್ನೂ ಬಿಟ್ಟು ಓಡುವ ಅವಶ್ಯವಿಲ್ಲ. ಅಲ್ಲಿಯೇ ಉಳಿದು ಬೇಕಾದ ಕರ್ಮವನ್ನು ಮಾಡಬಹುದು.

ಆದರೆ ಕರ್ಮವು ನಿಮ್ಮ ಸ್ವಾರ್ಥಕ್ಕಾಗಿ, ಉಪಭೋಗಕ್ಕಾಗಿ ಇದ್ದರೆ, ಅದನ್ನು ಆಚರಿಸಬೇಡಿರಿ. ವಿಷಯಸುಖವು ನಿಮ್ಮ ಧ್ಯೇಯವಲ್ಲ. ಮೊದಲು ಸಂಕುಚಿತ ಸ್ವಾರ್ಥವನ್ನು ಕೊಂದುಹಾಕಿ ಇಡೀ ಪ್ರಪಂಚವೇ ನೀವೆಂದು ತಿಳಿದುಕೊಳ್ಳಿರಿ. ಪೂರ್ವದ ಕ್ರೈಸ್ತರು ಹೇಳುತ್ತಿದ್ದಂತೆ 'ಹಳೇ' ಮನುಷ್ಯನು ಸಾಯಲೇಬೇಕು. ಈ ಜಗತ್ತು ನಮ್ಮ ಉಪಭೋಗಕ್ಕಾಗಿಯೇ ನಿರ್ಮಿಸಲ್ಪಟ್ಟಿರುವುದೆಂದು ತಿಳಿದುಕೊಳ್ಳುವ ಸ್ವಾರ್ಥ ವಿಚಾರವೇ ಈ 'ಹಳೇ' ಮನುಷ್ಯನು. ದೇವರು ಈ ಸೂರ್ಯ ಚಂದ್ರರನ್ನು ನಿರ್ಮಾಣ ಮಾಡಿರುವುದು ನನ್ನ ಸಲುವಾಗಿಯೇ ಎಂದು ತಿಳಿದುಕೊಳ್ಳಲು ಮೂರ್ಖ ತಾಯಿತಂದೆಗಳು ತಮ್ಮ ಮಕ್ಕಳಿಗೆ ಕಲಿಸುತ್ತಾರೆ. ಈ ಕುನ್ನಿಗಳಿಗಾಗಿ ಎಲ್ಲವನ್ನು ನಿರ್ಮಾಣಮಾಡುವುದೇ ದೇವರ ಕೆಲಸವೇ? ದೇವರಿಗೆ ಎರಡನೆಯ ಕೆಲಸವೇನೂ ಇಲ್ಲವೇ? ಇಂಥ ಮೂರ್ಖತನವನ್ನು ನಿಮ್ಮ ಮಕ್ಕಳಿಗೆ ಕಲಿಸಬೇಡಿರಿ. ಮತ್ತೆ ಕೆಲವು ಜನರು ಮತ್ತೊಂದು ರೀತಿಯ ಮೂರ್ಖತನವನ್ನು ಮಾಡುತ್ತಾರೆ. ಈ ಎಲ್ಲಾ ಪಶುಪಕ್ಷಿ ಪ್ರಾಣಿಗಳು ಇರುವುದು ತಮ್ಮ ಸಲುವಾಗಿಯೇ ಎಂದೂ, ತಾವು ಅವುಗಳನ್ನು ಕೊಂದು ತಿನ್ನಬೇಕೆಂದೇ ಅವುಗಳ ನಿರ್ಮಾಣವಾಗಿದೆಯೆಂದೂ, ಈ ಜಗತ್ತು ಮನುಷ್ಯರ ಸುಖಕ್ಕಾಗಿಯೇ ನಿರ್ಮಾಣವಾಗಿರುವುದೆಂದೂ ಇವರ ಉಪದೇಶ. ಇದೆಲ್ಲ ಹುಚ್ಚುತನ. ಮನುಷ್ಯನು ತನ್ನ ಸಲುವಾಗಿ ನಿರ್ಮಿಸಲ್ಪಟ್ಟಿರುವನೆಂದು ಹುಲಿಯು ಹೇಳಬಹುದು. 'ದೇವಾ, ಈ ಮನುಷ್ಯರು ಎಂಥ ಕೃತಘ್ನರು? ನನ್ನೆದುರಿಗೆ ಬಂದು ನಿಂತು ನನ್ನ ಬಾಯಿಗೆ ತುತ್ತಾಗುವುದಿಲ್ಲವಲ್ಲ! ನೀನು ಹಾಕಿಕೊಟ್ಟ ನಿಯಮವನ್ನು ಅವರು ಮುರಿಯುತ್ತಿದ್ದಾರೆ' ಎಂದು ಅದು ದೇವರನ್ನು ಮೊರೆಹೋಗಬಹುದು. ಜಗತ್ತು ನಮ್ಮ ಸಲುವಾಗಿ ನಿರ್ಮಿಸಲ್ಪಟ್ಟಿದ್ದರೆ ನಾವಾದರೂ ಜಗತ್ತಿನ ಸಲುವಾಗಿಯೇ ನಿರ್ಮಿಸಲ್ಪಟ್ಟಿದ್ದೇವೆ. ಈ ಪ್ರಪಂಚವು ನಮ್ಮ ಉಪಭೋಗಕ್ಕಾಗಿ ನಿರ್ಮಿಸಲ್ಪಟ್ಟಿರುವುದೆಂಬ ವಿಚಾರ ಬಹು ದುಷ್ಟವಾದುದು. ನಮ್ಮನ್ನು ಅಧೋಗತಿಗೆ ಎಳೆದೊಯ್ಯುವಂತಹದು ಅದೇ. ಈ ಪ್ರಪಂಚವಿರುವುದು ನಮ್ಮ ಸಲುವಾಗಿ ಅಲ್ಲ. ಪ್ರತಿ ವರ್ಷ ಕೋಟಿಗಟ್ಟಲೆ ಜನರು ಇಹಲೋಕವನ್ನು ಬಿಟ್ಟು ತೆರಳುತ್ತಾರೆ. ಪ್ರಪಂಚಕ್ಕೆ ಅವರಿಂದೇನೂ ಬಾಧೆ ತಟ್ಟಿಲ್ಲ ಅದರಂತೆ ಕೋಟಿಗಟ್ಟಲೆ

ಜನರು ಪುನಃ ಹುಟ್ಟುತ್ತಾರೆ. ಜಗತ್ತು ನಮ್ಮ ಸಲುವಾಗಿ ನಿರ್ಮಾಣವಾಗಿದ್ದರೆ ನಮ್ಮ ನಿರ್ಮಾಣವೂ ಜಗತ್ತಿನ ಸಲುವಾಗಿಯೇ ಆಗಿದೆ.

ಯೋಗ್ಯ ರೀತಿಯಿಂದ ಕರ್ಮ ಮಾಡುವುದೆಂದರೆ ಈ ಆಸಕ್ತಿಯನ್ನು ಮೊದಲು ಬಿಟ್ಟುಬಿಡುವುದು. ಎರಡನೆಯ ಮಾತೆಂದರೆ, ಕರ್ಮ ಪ್ರವಾಹದಲ್ಲಿ ಬೇಕಾಗಿ ಸೇರಿಕೊಳ್ಳದಿರುವುದು. ಮಾಡಬೇಕಾದ ಕೆಲಸವನ್ನು ಸಾಕ್ಷೀಭೂತನಾಗಿ ಮಾಡುತ್ತ ಹೋಗುವುದು. 'ದಾಸಿಯ ದೃಷ್ಟಿಯಿಂದ ನಿಮ್ಮ ಮಕ್ಕಳನ್ನು ನೋಡುತ್ತಿರಬೇಕೆ'ಂದು ನನ್ನ ಗುರುದೇವನು ಹೇಳುತ್ತಿದ್ದನು. ದಾಸಿ ನಿಮ್ಮ ಮಗುವನ್ನು ತೆಗೆದುಕೊಂಡು ಅಪ್ಪಿ ಮುದ್ದಿಟ್ಟು ಅದರ ಕೂಡ ಆಟವಾಡುತ್ತ, ಅದು ತನ್ನ ಸ್ವಂತ ಮಗುವೋ ಎಂಬಂತೆ ಬಹು ಮೃದುವಾಗಿ ವರ್ತಿಸುತ್ತಾಳೆ. ಆದರೆ ನಿಮ್ಮ ಮನೆಯ ಕೆಲಸವನ್ನು ಬಿಟ್ಟು ಹೋಗೆಂದು ಹೇಳಿದ ಕೂಡಲೇ, ಆಕೆ ತನ್ನ ಇದ್ದಬಿದ್ದ ವಸ್ತುಗಳನ್ನೆಲ್ಲ ಕಟ್ಟಿಕೊಂಡು ಹೋಗಲು ಸಿದ್ಧಳಿರುತ್ತಾಳೆ. ಅಂಟಿಕೊಂಡಿದ್ದ ಆಸಕ್ತಿಯನ್ನೆಲ್ಲ ಮರೆತುಬಿಡುತ್ತಾಳೆ. ನಿಮ್ಮ ಮಕ್ಕಳನ್ನು ಬಿಟ್ಟು ಮತ್ತೊಬ್ಬರ ಮಕ್ಕಳನ್ನು ಕರೆದುಕೊಳ್ಳಲು ಆಕೆಗೇನೂ ದುಃಖವೆನಿಸುವುದಿಲ್ಲ. ನಿನ್ನದೆಂದು ತಿಳಿದುಕೊಂಡ ಎಲ್ಲ ಪದಾರ್ಥಗಳ ಕೂಡ ನೀನು ಅದರಂತೆಯೇ ವರ್ತಿಸಬೇಕು. ನೀನು ದಾಸಿ; ಮತ್ತು ದೇವರಲ್ಲಿ ನಿನಗೆ ವಿಶ್ವಾಸವಿದ್ದುದೇ ಆದರೆ ನಿನ್ನವೆಂದು ತಿಳಿದುಕೊಂಡಿದ್ದ ಈ ಪದಾರ್ಥಗಳೆಲ್ಲವೂ ದೇವರವು. ಮಹಾಪರಾಧವು ಕೂಡ ಒಮ್ಮೊಮ್ಮೆ ಮಹಾಗುಣವೆಂದು ತೋರಿಸಿಕೊಳ್ಳುತ್ತದೆ. ನಮ್ಮನ್ನವಲಂಬಿಸಿ ಕೆಲವರು ಜೀವಿಸಿರುವರೆಂದೂ ಪರರಿಗೆ ನಾವು ಕಲ್ಯಾಣ ಮಾಡಬಲ್ಲೆವೆಂದೂ ತಿಳಿದುಕೊಳ್ಳುವುದು ಅಪರಾಧ, ದೌರ್ಬಲ್ಯ. ಈ ಕಲ್ಪನೆಯೇ ನಮ್ಮ ಆಸಕ್ತಿಗೆ ಕಾರಣ. ಈ ಆಸಕ್ತಿಯಿಂದಲೇ ನಮ್ಮ ದುಃಖ ಪರಂಪರೆಗಳ ಉತ್ಪತ್ತಿ. ನಮ್ಮ ಮೇಲೆ ಕೈಯೂರಿಕೊಂಡು ಈ ಪ್ರಪಂಚದಲ್ಲಿ ಯಾರೂ ಕುಳಿತಿಲ್ಲವೆಂದೂ, ತಿರುಕನು ಕೂಡ ನಾವು ನೀಡುವ ಭಿಕ್ಷೆಯ ಮೇಲೆ ಭಾರವನ್ನಿಟ್ಟು ನಿಂತಿಲ್ಲವೆಂದೂ ಮನಸ್ಸಿಗೆ ನಾವು ಮೇಲಿಂದ ಮೇಲೆ ಹೇಳುತ್ತಿರಬೇಕು. ನಮ್ಮ ದಾನಕ್ಕಾಗಿ, ನಮ್ಮ ದಯಾಳುತನಕ್ಕಾಗಿ ಕಾದುಕೊಂಡು ಒಬ್ಬ ವ್ಯಕ್ತಿ ಕೂಡ ಕುಳಿತಿಲ್ಲ ಒಂದೇ ಒಂದು ಜೀವನವೂ ನಮ್ಮ ಸಹಾಯಕ್ಕಾಗಿ ತಡೆದು ನಿಂತಿಲ್ಲ ಸೃಷ್ಟಿದೇವತೆ ಎಲ್ಲರಿಗೂ ಸಹಾಯ ಮಾಡುತ್ತಿದ್ದಾಳೆ.

ಈ ಪ್ರಪಂಚದಲ್ಲಿ ನಮ್ಮಂಥ ಲಕ್ಷಗಟ್ಟಲೆ ಜನರು ಹುಟ್ಟಿ ಬರದಿದ್ದರೆ ಕೂಡ ಯಾವುದೂ ತಡೆದು ನಿಲ್ಲುವುದಿಲ್ಲ. ಪ್ರಕೃತಿದೇವಿಯು ನೆರವಾಗಿಯೇ ಆಗುವಳು. ಪ್ರಪಂಚದಲ್ಲಿ ನಮ್ಮ ನಿಮ್ಮಂಥವರ ಸಲುವಾಗಿ ಯಾವುದೂ ತಡೆದು ನಿಲ್ಲುವುದಿಲ್ಲ. ಪ್ರಕೃತಿದೇವಿಯ ರಥವು ನಿರ್ವಿಘ್ನವಾಗಿ ಎಂದಿನಂತೆ ಕಡೆತನಕ ಸಾಗುವುದು. ಪರೋಪಕಾರಕ್ಕೆ ನಮಗೆ ಅನುವು ದೊರೆತು ಆ ಮಾರ್ಗದಿಂದ ನಮ್ಮ ಉದ್ಧಾರಕ್ಕೆ ಅವಕಾಶವು ಸಿಕ್ಕಿದುದೇ ಒಂದು ಮಹೋಪಕಾರವೆಂದೂ ಅದರಿಂದ ನಾವು ಧನ್ಯರಾದೆವೆಂದೂ ತಿಳಿದು ಕೊಳ್ಳಬೇಕು. ಆಯುಷ್ಯದಲ್ಲಿ ನಾವು ಕಲಿಯಬೇಕಾದ ಮಹತ್ವದ ಬೋಧೆ ಯೆಂದರೆ ಇದೇ. ಈ ತತ್ವವನ್ನು ನಾವು ಚನ್ನಾಗಿ ಮನನಮಾಡಿಕೊಂಡರೆ ನಾವೆಂದೂ ದುಃಖಿಗಳಾಗಲಾರೆವು. ಸಮಾಜದಲ್ಲಿ ನಾವು ಎಲ್ಲಿ ಬೇಕಾದಲ್ಲಿ ಹೊಕ್ಕು ಅಪಾಯವಿಲ್ಲದೆಯೇ ಬೆರೆಯಬಹುದು. ನಿಮಗೆ ಪತ್ನಿಯೂ ಗಂಡನೂ ಅನೇಕ ಸೇವಕರೂ ದೌಲತ್ತೂ ಸಂಪತ್ತೂ ಇರಬಹುದು. ಪ್ರಪಂಚವು ನಿಮ್ಮ ಸಲುವಾಗಿ ಇಲ್ಲ, ಮತ್ತು ಪ್ರಪಂಚಕ್ಕೆ ನಿಮ್ಮ ಸಹಾಯದ ಕೊರತೆಯಾಗಿಲ್ಲವೆಂಬ ತತ್ವವನ್ನು ಅನುಸರಿಸಿ ನಡೆದುಕೊಂಡರೆ ನಿಮಗೆ ಇವುಗಳಿಂದೇನೂ ಅಪಾಯವಾಗುವುದಿಲ್ಲ. ನಿಮ್ಮ ಕೆಲವು ಮಿತ್ರರೂ ಪ್ರಿಯರೂ ಇದೇ ವರ್ಷವೇ ತೀರಿಕೊಂಡಿರಬಹುದು. ಅವರು ಪುನಃ ಹುಟ್ಟಿ ಬರಲೆಂದು ಪ್ರಪಂಚವು ಮುಂದೆ ಸಾಗದೆ ಹಾಗೆಯೇ ಕಾದುಕೊಂಡು ಕುಳಿತಿರುವುದೆ? ಪ್ರಪಂಚಪ್ರವಾಹವು ತಡೆದು ನಿಂತಿರುವುದೆ? ಇಲ್ಲ, ಎಂದೂ ಇಲ್ಲ. ಆದ್ದರಿಂದ ಲೋಕಕಲ್ಯಾಣಕ್ಕಾಗಿ ನೀವು ಏನನ್ನಾದರೂ ಮಾಡ ತಕ್ಕದ್ದಿರುವುದೆಂಬ ವಿಚಾರವನ್ನು ಮೊದಲು ನಿಮ್ಮ ತಲೆಯೊಳಗಿಂದ ತಳ್ಳಿ ಹಾಕಿರಿ. ಜಗತ್ತಿಗೆ ನಿಮ್ಮ ಸಹಾಯವೇನೂ ಬೇಕಿಲ್ಲ. ಲೋಕಕಲ್ಯಾಣ ಕ್ಕಾಗಿ ತಾನು ಹುಟ್ಟಿರುವೆನೆಂದು ತಿಳಿದುಕೊಳ್ಳುವುದು ಶುದ್ಧ ಮೂರ್ಖತನ. ಅದು ಕೇವಲ ಸೊಕ್ಕು, ಅಹಂಕಾರ, ಸದ್ಗುಣವೆಂದು ತೋರಿಸಿಕೊಳ್ಳುವ ಸ್ವಾರ್ಥ. ಪ್ರಪಂಚದ ಕಾರ್ಯಕಲಾಪಗಳೆಲ್ಲವೂ ಸ್ವತಂತ್ರವಾಗಿವೆಯೆಂಬ ಮತ್ತು ಅವು ನಮ್ಮ ನಿಮ್ಮನ್ನು ಅವಲಂಬಿಸಿಲ್ಲವೆಂಬ ವಿಚಾರವು ನಿಮ್ಮ ನಾಡಿ ನಾಡಿಗಳಲ್ಲಿಯೂ ರೋಮರಂಧ್ರಗಳಲ್ಲಿಯೂ ಮನೋಬುದ್ಧಿಗಳಲ್ಲಿಯೂ ಒಳಹೊಕ್ಕು ಬೇರೂರಿಕೊಂಡು ನಿಂತಿತೆಂದರೆ, ಕರ್ಮದಿಂದ ನಿಮಗೇನೂ ದುಃಖವುಂಟಾಗಲಾರದು. ಒಬ್ಬ ಮನುಷ್ಯನಿಗೆ ನೀವು ಏನನ್ನಾದರೂ

ಕೊಟ್ಟು ಏನೂ ಪ್ರತಿಫಲವನ್ನು—ಅವನಿಂದ ಕೃತಜ್ಞತೆಯನ್ನು ಕೂಡ—ಅಪೇಕ್ಷಿಸದಿದ್ದರೆ, ಅವನ ಕೃತಘ್ನತನವು ನಿಮ್ಮನ್ನು ಬಾಧಿಸುವುದಿಲ್ಲ. ಏಕೆಂದರೆ ನೀವು ಅವನಿಂದ ಏನನ್ನೂ ಅಪೇಕ್ಷಿಸಿಲ್ಲ. ಯಾವ ತರದ ಪ್ರತಿಫಲಕ್ಕೂ ನಿಮಗೆ ಅಧಿಕಾರವಿತ್ತೆಂದು ನೀವು ತಿಳಿದಿದ್ದಿಲ್ಲ. ನೀವು ಅವನಿಗೆ ಕೊಡತಕ್ಕದ್ದನ್ನು ಕೊಟ್ಟಿರಷ್ಟೇ. ಅವನಿಗೆ ಅದನ್ನು ಅವನ ಕರ್ಮವೇ ಕೊಡಿಸಿತು. ನಿಮ್ಮ ಕರ್ಮವು ನೀವು ಅವನಿಗೆ ಅದನ್ನು ಕೊಡುವಂತೆ ಮಾಡಿತು. ದಾನ ಮಾಡಿದೆವೆಂದು ಅಭಿಮಾನಪಡುವುದೇಕೆ? ದ್ರವ್ಯವನ್ನಾಗಲಿ ದಾನ ಮಾಡತಕ್ಕ ಉಳಿದ ಪದಾರ್ಥಗಳನ್ನಾಗಲಿ ಕೈಯೆತ್ತಿಕೊಡುವ ಕೂಲಿಯ ಆಳು ನೀವು. ಜಗತ್ತು ತನ್ನ ಸ್ವಂತ ಕರ್ಮದಿಂದ ಅದರ ಸ್ವೀಕಾರಕ್ಕೆ ಪಾತ್ರತೆಯನ್ನು ಹೊಂದಿತ್ತು. ಅಹಂಕಾರವನ್ನು ಹೊಂದುವುದಕ್ಕೂ ಅಭಿಮಾನಪಡುವುದಕ್ಕೂ ಅವಕಾಶವೆಲ್ಲಿದೆ? ನೀವು ದಾನಮಾಡಿದ್ದೇನೂ ಮಹತ್ವದ ವಿಷಯವಲ್ಲ. ಅನಾಸಕ್ತಿಯ ಭಾವನೆಯನ್ನು ಚನ್ನಾಗಿ ಮೈಗೂಡಿಸಿಕೊಂಡಿದ್ದರೆ, ನಿಮ್ಮಲ್ಲಿ ಒಳಿತು ಕೆಡುಕುಗಳೆಂಬ ವಿಚಾರವೇ ಉಳಿಯುವುದಿಲ್ಲ. ಒಳಿತು ಕೆಡುಕುಗಳೆಂಬ ಭೇದ ಸ್ವಾರ್ಥಮೂಲಕವಾದದ್ದು. ಈ ವಿಷಯವನ್ನು ತಿಳಿದುಕೊಳ್ಳುವುದು ಕಠಿಣವೆಂಬುದೇನೋ ನಿಜ. ಆದರೆ ಈ ಜಗತ್ತಿನಲ್ಲಿ ನಿಮ್ಮ ಸಮ್ಮತಿಯಿಲ್ಲದೆ ನಿಮ್ಮ ಮೇಲೆ ಯಾವುದೂ ಬಲಾತ್ಕಾರವನ್ನಾಗಲಿ ಅಧಿಕಾರವನ್ನಾಗಲಿ ನಡೆಯಿಸಲಾರದೆಂಬ ತತ್ವವು ಕಾಲಕ್ರಮೇಣ ನಿಮಗೆ ಹೊಳೆಯದಿರಲಾರದು. ಆತ್ಮನು ತನ್ನ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವ ಮೂರ್ಖತನವನ್ನು ಮಾಡದಿದ್ದರೆ ಅವನ ಮೇಲೆ ಯಾರ ಅಧಿಕಾರವೂ ನಡೆಯಲಾರದು. ಆದ್ದರಿಂದ ಈ ಅನಾಸಕ್ತಿಯೋಗದಿಂದ ನೀವು ಜಗತ್ತನ್ನೇ ಜಯಿಸಿ ನಿಮ್ಮ ಮೇಲೆ ಯಾರ ಅಧಿಕಾರವೂ ನಡೆಯದಂತೆ ಮಾಡಿಕೊಳ್ಳಿರಿ. ನಿಮ್ಮ ಸಮ್ಮತಿಯಿಲ್ಲದೆ ನಿಮ್ಮನ್ನು ಯಾರೂ ಆಳಲಾರರೆಂದು ಹೇಳುವುದೇನೋ ಬಲು ಸುಲಭ. ಆದರೆ ಲೋಕದಿಂದ ತಾನು ಬಾಧೆಪಡದೆ, ಲೋಕವನ್ನು ಬಾಧೆಪಡಿಸದೆ ಯಾರ ಅಂಕಿತಕ್ಕೂ ಒಳಗಾಗದೆ ಸ್ವತಂತ್ರನಾಗಿರುವಂಥ ಮನುಷ್ಯನ ನಿಜವಾದ ಲಕ್ಷಣವೇನು? ಸುಖದುಃಖಗಳೂ ಮಾನಾಪಮಾನಗಳೂ ಸುದೈವದ ಇಲ್ಲವೆ ದುರ್ದೈವದ ಸಂಗತಿಗಳೂ ಅವರ ಮನಸ್ಸಿನಲ್ಲಿ ಏನೂ ಪರಿಣಾಮವನ್ನುಂಟುಮಾಡುವುದಿಲ್ಲ.

ಎಲ್ಲ ಪರಿಸ್ಥಿತಿಯಲ್ಲಿಯೂ ಅವರು ಸಮನಾಗಿಯೇ ಉಳಿಯುತ್ತಾರೆ.

ಭರತಭೂಮಿಯಲ್ಲಿ ವ್ಯಾಸನೆಂಬ ಒಬ್ಬ ಮಹರ್ಷಿಯಿದ್ದನು. ಅವನೇ ವೇದಾಂತ ಸೂತ್ರಗಳ ಕರ್ತ; ದೊಡ್ಡ ಸಾಧುಪುರುಷ. ಅವನ ತಂದೆ ಪೂರ್ಣತೆಯನ್ನು ಹೊಂದಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಅವನ ಅಜ್ಜನೂ ಈ ಪ್ರಯತ್ನದಲ್ಲಿ ಸಿದ್ಧಿಯನ್ನು ಹೊಂದಲಿಲ್ಲ. ಸ್ವತಃ ವ್ಯಾಸನು ಕೂಡ ಪೂರ್ಣ ಸಿದ್ಧಿಯನ್ನು ಹೊಂದಲಿಲ್ಲ. ಆದರೆ ಅವನ ಮಗನಾದ ಶುಕನು ಪೂರ್ಣ ಸಿದ್ಧನಾಗಿಯೇ ಹುಟ್ಟಿದನು. ವ್ಯಾಸನು ತನ್ನ ಮಗನಿಗೆ ವಿದ್ಯೆ ಬುದ್ಧಿಯನ್ನು ಕಲಿಸಿದನು. ಸ್ವತಃ ತಾನೇ ಅವನಿಗೆ ಸತ್ಯವಸ್ತುವಿನ ಜ್ಞಾನವನ್ನು ಕಲಿಸಿಕೊಟ್ಟು ಜನಕ ಮಹಾರಾಜನ ಸಭೆಗೆ ಅವನನ್ನು ಕಳುಹಿದನು. ಜನಕನು ಒಬ್ಬ ದೊಡ್ಡ ರಾಜ. ಅವನನ್ನು ವಿದೇಹಜನಕನೆಂದು ಹೇಳುತ್ತಿದ್ದರು. ವಿದೇಹನೆಂದರೆ ದೇಹವಿಲ್ಲದವನು. ತಾನು ಅರಸನಾಗಿದ್ದರೂ ತನಗೆ ದೇಹವಿರುವುದೆಂಬುದನ್ನು ಅವನು ಸಂಪೂರ್ಣವಾಗಿ ಮರೆತು ಬಿಟ್ಟಿದ್ದನು. ತಾನು ಚೈತನ್ಯನಿರುವೆನೆಂದು ಅವನು ಯಾವಾಗಲೂ ತಿಳಿದುಕೊಂಡಿದ್ದನು. ಅವನಲ್ಲಿ ಶಿಕ್ಷಣ ಪಡೆಯುವುದಕ್ಕೆಂದು ಈ ಶುಕಬಾಲಕನು ಅಲ್ಲಿಗೆ ಕಳುಹಲ್ಪಟ್ಟನು. ವ್ಯಾಸನ ಮಗನಾದ ಶುಕನು ತನ್ನ ಕಡೆಗೆ ಜ್ಞಾನವನ್ನು ಪಡೆಯುವುದಕ್ಕೆ ಬರುತ್ತಿರುವನೆಂದು ಅವನು ಮೊದಲೇ ಜ್ಞಾನದೃಷ್ಟಿಯಿಂದ ತಿಳಿದುಕೊಂಡನು. ಆದ್ದರಿಂದ ಅವನು ಮೊದಲೇ ಕೆಲವು ವ್ಯವಸ್ಥೆಯನ್ನು ಮಾಡಿಟ್ಟಿದ್ದನು. ಆ ಬಾಲಕನು ಅರಮನೆಯ ಬಾಗಿಲಿಗೆ ಬಂದು ಮುಟ್ಟಿದರೂ ಯಾರೂ ಅವನನ್ನು ಕಣ್ಣೆತ್ತಿ ನೋಡಲಿಲ್ಲ; ಮುಂದೆ ಬಾ ಎಂದು ಕರೆಯಲಿಲ್ಲ. ಅವನಿಗೆ ಕುಳ್ಳಿರಲು ಸ್ಥಳವೊಂದನ್ನು ಮಾತ್ರ ತೋರಿಸಿದರು. ಶುಕನು ಅಲ್ಲಿ ಮೂರು ಹಗಲು ಮೂರು ರಾತ್ರಿಗಳ ವರೆಗೆ ಕುಳಿತುಕೊಂಡರೂ ಅವನನ್ನು ಯಾರೂ ಮಾತಾಡಿಸಲಿಲ್ಲ. ಅವನು ಯಾರು, ಎಲ್ಲಿಂದ ಬಂದ, ಏಕೆ ಬಂದನೆಂದು ಕೂಡ ಯಾರೂ ಕೇಳಲಿಲ್ಲ. ಅವನೊಬ್ಬ ಮಹರ್ಷಿಯ ಮಗ. ಅವನ ತಂದೆಯನ್ನು ಇಡೀ ಪ್ರಪಂಚವೇ ಮನ್ನಿಸುತ್ತಿತ್ತು. ಅವನು ಕೂಡ ದೊಡ್ಡ ಸುಶಿಕ್ಷಿತ ಮತ್ತು ಮರ್ಯಾದೆಯುಳ್ಳ ಮನುಷ್ಯ. ಆದರೂ ಈ ಕೀಳು ಜಾತಿಯ ಮೂಢ ದ್ವಾರಪಾಲಕರು ಅವನನ್ನು ಲೆಕ್ಕಿಸಲೊಲ್ಲರು. ಆ ಮೇಲೆ ಒಮ್ಮಿಂದೊಮ್ಮೆ ರಾಜನ ಮಂತ್ರಿಗಳೂ ದೊಡ್ಡ ದೊಡ್ಡ ಅಧಿಕಾರಿಗಳೂ ಅರಮನೆಯಿಂದ ಬಂದು ಬಹಳ ವೈಭ

ವ್ರೋತ್ಸವಾದಿಗಳಿಂದ ಅವನನ್ನು ಸ್ವಾಗತಿಸಿ ಅರಮನೆಗೆ ಕರೆದುಕೊಂಡು ಹೋದರು. ಅವನಿಗಾಗಿ ವೈಭವಪೂರ್ಣವಾದ ಕೋಣೆಗಳನ್ನೂ ಸುವಾಸಿಕ ನೀರಿನ ಸ್ನಾನವನ್ನೂ ಬಹು ಬೆಲೆಯ ಸುಂದರ ವಸ್ತ್ರಾಲಂಕಾರಗಳನ್ನೂ ಏರ್ಪಾಡು ಮಾಡಿದ್ದರು. ಎಂಟು ದಿನಗಳವರೆಗೆ ಅವನನ್ನು ಅಲ್ಲಿ ವಿವಿಧ ವಿಲಾಸೋಪಭೋಗಗಳಲ್ಲಿ ತೊಡಗಿಸಿದ್ದರು. ಆದರಸತ್ಕಾರದ ರೀತಿಯಲ್ಲಿ ಇಷ್ಟು ಆಕಸ್ಮಿಕವಾದ ಮತ್ತು ತೀರ ಪರಸ್ಪರ ವಿರೋಧವಾದ ವ್ಯತ್ಯಾಸ ವಾದರು ಕೂಡ ಆ ಶುಕನ ಶಾಂತ, ಗಂಭೀರವಾದ ಮುಖಮುದ್ರೆ ಎಳ್ಳಷ್ಟೂ ಕದಲಲಿಲ್ಲ. ಅವನ ಮುಖಮುದ್ರೆ ಬಾಗಿಲಿನ ಹೊರಗೆ ತಿರಸ್ಕೃತನಾಗಿದ್ದಾಗ ಇದ್ದಂತೆಯೇ ಈಗಿನ ವಿಲಾಸೋಪಭೋಗಗಳ ಮಧ್ಯದಲ್ಲಿಯೂ ಅವಿಚಲ ವಾಗಿತ್ತು. ಅವನು ಒಂದೇ ಸ್ಥಿತಿಯಲ್ಲಿದ್ದನು. ಆ ಮೇಲೆ ಅವನನ್ನು ರಾಜನೆದುರಿಗೆ ಕರೆತಂದರು. ರಾಜನು ಸಿಂಹಾಸನದ ಮೇಲೆ ಕುಳಿತಿದ್ದನು. ಸಂಗೀತ ವಾದ್ಯ ನೃತ್ಯಾದಿಗಳು ಯಥೇಚ್ಛವಾಗಿ ನಡೆದಿದ್ದವು. ಆಗ ರಾಜನು ಅವನಿಗೆ ಅಂಚಿನ ವರೆಗೆ ತುಂಬಿದ ಒಂದು ಹಾಲಿನ ಬಟ್ಟಲನ್ನು ಕೊಟ್ಟು ಒಂದು ಹನಿಯು ಕೂಡ ತುಳಕಿ ಬೀಳದಂತೆ ಆ ಭವ್ಯ ಮಂಟಪದ ಸುತ್ತಲು ಏಳು ಪ್ರದಕ್ಷಿಣೆ ಹಾಕಲು ಹೇಳಿದನು. ಶುಕಬಾಲಕನು ಆ ಬಟ್ಟಲನ್ನೆತ್ತಿಕೊಂಡು ಸಂಗೀತ ವಾದ್ಯ ನೃತ್ಯ ಮತ್ತು ಆಕರ್ಷಕವಾದ ಸುಂದರ ಮುಖಗಳ ಮಧ್ಯದಿಂದಲೇ ಮುಂದೆ ಸಾಗಿದನು. ಅರಸನ ಆಜ್ಞೆ ಯಂತೆ ಏಳು ಸಲ ಪ್ರದಕ್ಷಿಣೆ ಹಾಕಿದರೂ ಹಾಲಿನ ಒಂದು ಹನಿಯು ಕೂಡ ಬೀಳಲಿಲ್ಲ. ಆ ಬಾಲಕನ ಮನಸ್ಸನ್ನು ಜಗತ್ತಿನೊಳಗಿನ ಯಾವ ಪದಾ ರ್ಥವೂ ಅವನ ಸಮ್ಮತಿಯಿಲ್ಲದೆ ಆಕರ್ಷಿಸಲು ಶಕ್ಯವಾಗಲಿಲ್ಲ. ಆ ಬಟ್ಟ ಲನ್ನು ಅರಸನಿಗೆ ತಿರುಗಿ ತಂದುಕೊಟ್ಟ ಮೇಲೆ ಜನಕ ಮಹಾರಾಜನು 'ನಿನ್ನ ತಂದೆ ನಿನಗೆ ಕಲಿಸಿದ್ದನ್ನೇ, ನೀನು ಸ್ವತಃ ಕಲಿತುಕೊಂಡಿದ್ದನ್ನೇ ನಾನು ನಿನಗೆ ಪುನಃ ಹೇಳುವೆನು. ನೀನು ಸತ್ಯವನ್ನು ಸಂಪೂರ್ಣವಾಗಿ ತಿಳಿದುಕೊಂಡಿರುವೆ. ಮನೆಗೆ ಹೋಗು' ಎಂದು ಹೇಳಿದನು.

ಹೀಗೆ ಆತ್ಮನಿಗ್ರಹವನ್ನು ಕಲಿತ ಮನುಷ್ಯನ ಮೇಲೆ ಹೊರಗಣ ಯಾವ ವಸ್ತುಗಳೂ ಸಂಸ್ಕಾರವನ್ನುಂಟು ಮಾಡಲಾರವು. ಅವನು ಸರ್ವ ಬಂಧನಗಳಿಂದಲೂ ಮುಕ್ತನಾಗುವನು. ಅವನ ಪಾಲಿಗೆ ದಾಸ್ಯವೆಂಬು ದಿಲ್ಲ. ಅವನ ಮನಸ್ಸು ಸ್ವತಂತ್ರವಾಗಿರುತ್ತದೆ. ಅಂಥವರು ಮಾತ್ರವೇ ಈ

ಪ್ರಪಂಚದಲ್ಲಿ ಬದುಕಿ ಬಾಳುವೆ ಮಾಡಲು ಯೋಗ್ಯರು. ಸಾಮಾನ್ಯವಾಗಿ ಜನರು ಈ ಪ್ರಪಂಚದ ವಿಷಯದಲ್ಲಿ ಎರಡು ತರದ ಅಭಿಪ್ರಾಯಗಳನ್ನು ತಾಳುತ್ತಾರೆ. ಕೆಲವರು ನಿರಾಶಾವಾದಿಗಳು ' ಈ ಜಗತ್ತು ಎಷ್ಟು ಭಯಂಕರ ವಾಗಿದೆ! ಎಷ್ಟು ದುಷ್ಟತನದಿಂದ ತುಂಬಿದೆ ' ಎನ್ನುತ್ತಾರೆ. ಮತ್ತೆ ಕೆಲ ವರು ಆಶಾವಾದಿಗಳು ' ಈ ಜಗತ್ತು ಎಷ್ಟು ಸುಂದರ, ಎಷ್ಟು ಆಶ್ಚರ್ಯ ಕರ ' ಎನ್ನುತ್ತಾರೆ. ಮನಸ್ಸನ್ನು ಜಯಿಸಿಕೊಳ್ಳದಿದ್ದವರಿಗೆ ಈ ಜಗತ್ತು ಅನರ್ಥಪೂರ್ಣವೆಂದೂ ಏನಿಲ್ಲೆಂದರೂ ಒಳಿತು ಕೆಡುಕುಗಳ ಮಿಶ್ರಣ ವೆಂದೂ ಕಂಡುಬರುವುದು. ಮನಸ್ಸನ್ನು ನಾವು ಜಯಿಸಿ ವಶದಲ್ಲಿಟ್ಟು ಕೊಂಡರೆ ಇದೇ ಜಗತ್ತು ನಮಗೆ ಆನಂದಮಯವಾಗುವುದು. ಆ ಮೇಲೆ ಒಳಿತು ಕೆಡುಕುಗಳೆಂಬ ಯಾವ ದ್ವಂದ್ವಗಳೂ ನಮ್ಮನ್ನು ಬಾಧಿಸಲಾರವು; ಜಗತ್ತಿನೊಳಗಿನ ಪ್ರತಿಯೊಂದು ಪದಾರ್ಥವೂ ತನ್ನ ತನ್ನ ಯೋಗ್ಯ ಸ್ಥಳ ದಲ್ಲಿ ಚಂದವಾಗಿದ್ದಂತೆ ಕಾಣುತ್ತದೆ. ಪ್ರಪಂಚವು ನರಕದ ಕೂಪವೆಂದು ಮೊದಲಿಗೇ ಹೇಳಿರುವರು. ಅದೇ ಪ್ರಪಂಚವು ಮನೋನಿಗ್ರಹ ಕಾರ್ಯ ದಲ್ಲಿ ಜಯಶಾಲಿಯಾದ ಮೇಲೆ ಸ್ವರ್ಗವಾಗಿರುವುದೆಂದು ಕೊನೆಗೆ ಹೇಳು ವರು. ನಾವು ನಿಜವಾದ ಕರ್ಮಯೋಗಿಗಳಾಗಿದ್ದು ಈ ಸ್ಥಿತಿಯನ್ನು ಸಂಪಾದಿಸಲು ಮನಮುಟ್ಟಿ ಯತ್ನಿಸುತ್ತಿದ್ದರೆ ನಾವು ಎಲ್ಲಿಂದ ಆರಂಭ ಮಾಡಿದರೂ ಕೊನೆಗೆ ಸಂಪೂರ್ಣ ಸ್ವಾರ್ಥತ್ಯಾಗವನ್ನೇ ಮೋಹಿಸಬೇಕು. ಸ್ವಾರ್ಥವು ಸಮೂಲ ನಾಶಹೊಂದಿದ ಮೇಲೆ, ಮೊದಲು ದುಃಖಪೂರ್ಣ ವಾಗಿ ಕಾಣುತ್ತಿದ್ದ ಇದೇ ಪ್ರಪಂಚವು ಸ್ವರ್ಗಸುಖದಿಂದ ತುಂಬಿಕೊಂಡಂತೆ ಕಾಣುತ್ತದೆ. ಪ್ರಪಂಚದ ವಾತಾವರಣವೇ ಆನಂದಮಯವಾಗಿ ಕಾಣು ವುದು. ಪ್ರತಿಯೊಬ್ಬ ಮನುಷ್ಯನು ಸಾಧುವಾಗಿ ತೋರುವನು. ಇದೇ ಕರ್ಮಯೋಗದ ಗುರಿ. ಪ್ರತ್ಯಕ್ಷ ಜೀವನದ ಪರಿಪೂರ್ಣತೆ ಇದು.

ಭಿನ್ನ ಭಿನ್ನ ಯೋಗಗಳು ಒಂದಕ್ಕೊಂದು ವಿರೋಧವಾಗಿಲ್ಲ. ಪ್ರತಿ ಯೊಂದೂ ನಮ್ಮನ್ನು ಅದೇ ಧ್ಯೇಯಕ್ಕೆ ಒಯ್ದು ಮುಟ್ಟಿಸುತ್ತದೆ, ಪೂರ್ಣತೆ ಯನ್ನು ತಂದುಕೊಡುತ್ತದೆ. ಚನ್ನಾಗಿ ಕಷ್ಟಪಟ್ಟು ಸಾಧನೆಯನ್ನು ಮಾತ್ರ ಮಾಡಬೇಕು. ಆಧ್ಯಾತ್ಮ ಜೀವನದ ರಹಸ್ಯವೆಲ್ಲ ಸಾಧನದಲ್ಲಿದೆ. ಶ್ರವಣ, ಮನನ, ನಿದಿಧ್ಯಾಸಗಳೆಂಬ ಮೂರು ಮೆಟ್ಟಿಲು ಎಲ್ಲ ಯೋಗ ಗಳಿಗೂ ಅನ್ವಯಿಸುತ್ತವೆ. ಅದರ ವಿಷಯವಾಗಿ ಮೊದಲು ನೀನು ಕೇಳಿ

ತಿಳಿದುಕೊಳ್ಳಬೇಕು. ನಿನಗೆ ತಿಳಿಯದ ಎಷ್ಟೋ ವಿಷಯಗಳು ಸತತ ಶ್ರವಣ ಮನನಗಳಿಂದ ಒಡೆದು ಕಾಣುವವು. ಎಲ್ಲವನ್ನೂ ಒಮ್ಮೆಲೇ ತಿಳಿದುಕೊಳ್ಳುವುದು ಬಹಳ ಕಷ್ಟ. ಪ್ರತಿಯೊಂದರ ಅರ್ಥವನ್ನೂ ತಿಳಿದು ಕೊಳ್ಳುವ ಶಕ್ತಿ ನಿಜವಾಗಿ ನಿನ್ನಲ್ಲಿಯೇ ಇರುವುದು. ಒಬ್ಬನು ಮತ್ತೊಬ್ಬ ನಿಗೆ ಹೊಸದಾಗಿ ಕಲಿಸುವನೆಂಬುದು ನಿಜವಲ್ಲ. ನಮಗೆ ನಾವೇ ಕಲಿಸಿ ಕೊಳ್ಳಬೇಕು. ಹೊರಗಣ ಶಿಕ್ಷಕನು ಸೂಚನೆಯನ್ನು ಮಾತ್ರ ಕೊಡುತ್ತಾನೆ. ಅಷ್ಟರಿಂದ ಒಳಗಣ ಶಿಕ್ಷಕನು ಎಚ್ಚತ್ತು ವಸ್ತುಸ್ಥಿತಿಯನ್ನು ತಿಳಿದುಕೊಳ್ಳಲು ಯತ್ನಿಸುತ್ತಾನೆ. ಆ ಮೇಲೆ ನಮ್ಮ ಸ್ವಂತ ಗ್ರಹಣಶಕ್ತಿಯಿಂದಲೂ ವಿಚಾರ ಶಕ್ತಿಯಿಂದಲೂ ಅರ್ಥವು ಸ್ಫುಟವಾಗುತ್ತ ನಮ್ಮ ಅಂತರಂಗದಲ್ಲಿಯೇ ಜ್ಞಾನವನ್ನು ಹೊಂದುವೆವು. ಈ ಜ್ಞಾನವೇ ಅದ್ಭುತ ಇಚ್ಛಾಶಕ್ತಿಯಾಗಿ ಪರಿಣಮಿಸುವುದು. ಮೊದಲು ಭಾವನಾಶಕ್ತಿ, ಆ ಮೇಲೆ ಇಚ್ಛಾಶಕ್ತಿ ಬೆಳೆ ಯುತ್ತವೆ. ಈ ಇಚ್ಛಾಶಕ್ತಿಯಿಂದಲೇ ಅದ್ಭುತ ಕಾರ್ಯಶಕ್ತಿಯು ಹುಟ್ಟಿ, ಆ ಶಕ್ತಿ ನಮ್ಮ ಪ್ರತಿಯೊಂದು ನಾಡಿಯಲ್ಲಿಯೂ ರೋಮರಂಧ್ರಗಳಲ್ಲಿಯೂ ಸೇರಿ ಎಲ್ಲ ದೇಹವೇ ನಿಸ್ವಾರ್ಥಕರ್ಮಯೋಗದ ಉತ್ತಮ ಸಾಧನವಾಗಿ ಮಾರ್ಪ ಡುವುದು. ಸಂಪೂರ್ಣ ಸ್ವಾರ್ಥತ್ಯಾಗವೂ ಆತ್ಮವಿಸ್ಮರಣೆಯೂ ಫಲಿಸುವವು.

ಈ ಸಿದ್ಧಿಗಾಗಿ ಯಾವ ಮತ, ಪಂಥ, ಧರ್ಮವೂ ಬೇಕಿಲ್ಲ. ಕ್ರೈಸ್ತ ನಿರಲಿ, ಜ್ಯೂ ಇರಲಿ, ಹಿಂದು ಇರಲಿ, ಮುಸಲ್ಮಾನನಿರಲಿ, ಯಾರಿದ್ದರೂ ಅಡ್ಡಿಯಿಲ್ಲ. ಸ್ವಾರ್ಥತ್ಯಾಗವೊಂದು ಸಾಧಿಸಿದರಾಯಿತು. ನೀನು ಸಂಪೂರ್ಣ ನಿಸ್ವಾರ್ಥಿಯಾಗಿದ್ದರೆ ಯಾವ ಗ್ರಂಥವನ್ನೂ ಓದದೆಯೂ ಯಾವ ದೇವಾ ಲಯವನ್ನು ಅಥವಾ ಚರ್ಚನ್ನು ಪ್ರವೇಶಿಸದೆಯೂ ಪೂರ್ಣತೆಯನ್ನು ಹೊಂದುವೆ. ನಮ್ಮ ಪ್ರತಿಯೊಂದು ಯೋಗಮಾರ್ಗವೂ ಉಳಿದವುಗಳ ಸಹಾಯವಿಲ್ಲದೆ ಪೂರ್ಣತೆಯನ್ನು ತಂದು ಕೊಡಲು ಸಮರ್ಥವಾಗಿದೆ. ಏಕೆಂದರೆ ಎಲ್ಲ ಯೋಗಗಳ ಧ್ಯೇಯವು ಒಂದೇ. ಕರ್ಮಯೋಗ, ಜ್ಞಾನ ಯೋಗ, ಭಕ್ತಿಯೋಗಗಳೆಲ್ಲ ಒಂದೊಂದೇ ಸ್ವತಂತ್ರವಾಗಿ ಮೋಕ್ಷಪ್ರಾಪ್ತಿಗೆ ಪ್ರತ್ಯಕ್ಷ ಮತ್ತು ಸ್ವತಂತ್ರ ಸಾಧನವಾಗುವಷ್ಟು ಸಮರ್ಥವಾಗಿವೆ. 'ಕರ್ಮ ಜ್ಞಾನಗಳು ಭಿನ್ನವೆಂದು ಮೂಢರು ಹೇಳುತ್ತಾರೆ, ಪಂಡಿತರಲ್ಲ.' ಅವು ತೋರಿಕೆಗೆ ಭಿನ್ನವಾಗಿ ಕಂಡರೂ ಕೊನೆಗೆ ಪೂರ್ಣತೆಯೆಂಬ ಒಂದೇ ಧ್ಯೇಯಕ್ಕೆ ಕರೆದೊಯ್ಯುತ್ತವೆಂದು ಪಂಡಿತರಿಗೆ ಗೊತ್ತುಂಟು.

# ಸ್ವಾತಂತ್ರ್ಯ

'ಕರ್ಮ' ಶಬ್ದಕ್ಕೆ ಕೆಲಸವೆಂದು ಅರ್ಥವಲ್ಲದೆ, ಮಾನಸಿಕ ಶಾಸ್ತ್ರದ ಪ್ರಕಾರ ಕಾರಣವೆಂಬ ಮತ್ತೊಂದು ಅರ್ಥವಿದೆ. ಕಾರ್ಯ, ಕೃತಿ, ವಿಚಾರ ಏನೇ ಇರಲಿ. ಅದು ಪರಿಣಾಮವನ್ನುಂಟುಮಾಡುತ್ತಿದ್ದರೆ ಅದಕ್ಕೆ ಕರ್ಮ ವೆನ್ನುವರು. ಕರ್ಮತತ್ತ್ವವೆಂದರೆ ಕಾರ್ಯ ಕಾರಣಭಾವ. ಕಾರಣವಿದ್ದಲ್ಲಿ ಅದಕ್ಕೆ ತಕ್ಕ ಕಾರ್ಯ ಅಥವಾ ಪರಿಣಾಮ ಇರಲೇಬೇಕು. ಇದು ತಪ್ಪಿ ದ್ದಲ್ಲ. ನಮ್ಮ ತತ್ತ್ವಜ್ಞಾನದ ಪ್ರಕಾರ ಈ ಕರ್ಮಬಂಧನ ತತ್ತ್ವವು ವಿಶ್ವ ದಲ್ಲಿ ಎಲ್ಲೆಡೆಯಲ್ಲಿಯೂ ಹಬ್ಬಿಕೊಂಡಿದೆ. ಈ ಜಗತ್ತಿನಲ್ಲಿ ನಾವು ಕಂಡಿದ್ದು, ಭಾವಿಸಿದ್ದು, ಮಾಡಿದ್ದು ಮೊದಲಾದ ಎಲ್ಲ ಕಾರ್ಯಗಳು ಹಿಂದಿನ ಕರ್ಮ ಗಳ ಫಲ ಅಥವಾ ಪರಿಣಾಮವಾಗಿರುತ್ತವೆ. ಇಷ್ಟೇ ಅಲ್ಲ, ಇವೇ ಕಾರ್ಯ ಗಳು ಪುನಃ ಮುಂದಿನ ಕಾರ್ಯಗಳಿಗೆ ಕಾರಣವಾಗಿ ತಮ್ಮ ಪರಿಣಾಮ ವನ್ನು ಉಂಟುಮಾಡುವವು. ಈ ಕರ್ಮಬಂಧನವೆಂದರೆ ಏನೆಂಬುದನ್ನು ತಿಳಿದುಕೊಳ್ಳುವುದು ಅವಶ್ಯ. ಬಂಧನ ಅಥವಾ ನಿಯಮವೆಂದರೆ ಪೂರ್ವ ಸಂಸ್ಕಾರ ಪರಂಪರೆಯ ಬಲದಿಂದ ಅದರಂತೆಯೇ ವರ್ತಿಸುವುದು. ಒಂದು ಕರ್ಮವು ಸಂಭವಿಸಿದ ಕೂಡಲೆ ಅದರ ಹಿಂದಿನಿಂದಲೇ ಮತ್ತೊಂದು ಸಂಭವಿಸಿದರೆ, ಅಥವಾ ಯಾವಾಗಲೂ ಒಂದು ಕರ್ಮದ ಜೊತೆಯಲ್ಲಿಯೇ ಮತ್ತೊಂದು ಕರ್ಮವು ಸಂಭವಿಸುವುದು ಕಂಡುಬಂದರೆ, ಈ ಪರಂಪರೆ ಅಥವಾ ಜೊತೆ ಮತ್ತೆ ಹೀಗೆಯೇ ಸಂಭವಿಸುವುದೆಂದು ನಮಗೆನಿಸುತ್ತದೆ. ನ್ಯಾಯಶಾಸ್ತ್ರವಿದರು ಇದನ್ನು ಪ್ರಾಪ್ತಿಯೆಂದು ಕರೆಯುತ್ತಾರೆ. ಅವರ ವಿಚಾರಸರಣಿಯಂತೆ ಈ ನಿಯಮಗಳ ಕಲ್ಪನೆ ಪರಸ್ಪರ ಸಂಬಂಧವನ್ನು ಅವಲಂಬಿಸಿರುತ್ತವೆ. ಒಂದು ಸಂಗತಿಯು ಸಂಭವಿಸಿತೆಂದರೆ ಆ ಕಾರಣ ದಿಂದ ಮತ್ತೊಂದು ನಿಶ್ಚಿತವಾದ ಸಂಗತಿಯು ಸಂಭವಿಸಲೇಬೇಕೆಂದು ನಮ್ಮ ಮನಸ್ಸಿನಲ್ಲಿ ಹೊಳೆಯುವುದಕ್ಕೆ ನಮ್ಮ ಪೂರ್ವ ಅನುಭವವೇ

ಕಾರಣ. ಇದು ನೈಯಾಯಿಕರ ಮತ. ನಾವು ಒಂದು ಕಾರ್ಯಪರಂಪರೆಯನ್ನು ಮೊದಲು ನೋಡಿರುತ್ತೇವೆ. ಮತ್ತು ಅದರ ಚಿತ್ರವು ಬೀಜರೂಪದಿಂದ ನಮ್ಮ ಮನಸ್ಸಿನಲ್ಲಿ ಮೂಡಿರುತ್ತದೆ. ಮತ್ತೊಮ್ಮೆ ಯಾವುದಾದರೊಂದು ಕಾರ್ಯವು ಸಂಭವಿಸಿದರೆ, ಅದಕ್ಕೆ ಸದೃಶವಾದಂಥ ಹಿಂದಿನ ಅನುಭವದ ಕಾರ್ಯದ ಸ್ಮರಣೆಯನ್ನು ಮನಸ್ಸಿನಲ್ಲಿ ತಂದುಕೊಂಡು ಹೊಂದಿಸಿ ನೋಡಿಕೊಳ್ಳುತ್ತೇವೆ. ಪೂರ್ವದ ಸರ್ವ ಕಾರ್ಯಪರಂಪರೆಯೂ ಇದ್ದಕ್ಕಿದ್ದಂತೆ ಪುನಃ ನಮ್ಮ ಮನಸ್ಸಿನಲ್ಲಿ ಮೂಡಿರುತ್ತದೆ. ಆ ಕಾರ್ಯಪರಂಪರೆಯು ಕೂಡ ಈಗಿನ ಕಾರ್ಯವನ್ನು ಹೋಲಿಸಿ ನೋಡಿ ಆ ಅನುಭವದಿಂದಲೇ ಈ ಕಾರ್ಯದ ತರುವಾಯ ಮತ್ತೊಂದು ಇಂಥ ನಿಶ್ಚಿತವಾದ ಕಾರ್ಯವೇ ಸಂಭವಿಸುವುದೆಂದು ಮನಸ್ಸಿಗೆ ತೋರುತ್ತದೆ. ಈ ಪೂರ್ವಾನುಭವವನ್ನೇ ನಾವು ನಿಯಮವೆಂದು ಹೇಳುತ್ತೇವೆ. ನಮ್ಮ ಚಿತ್ತವನ್ನು ಹೀಗೆ ವ್ಯಾಪಿಸಿಕೊಂಡಿರುವಂಥ ಕಾರ್ಯಪರಂಪರೆಯ ಒಂದು ವಿಶಿಷ್ಟ ಸ್ವರೂಪವನ್ನು ಕಾರಣವೆಂದೂ ಹೇಳುತ್ತೇವೆ. ಕೆಲವು ಕಾರ್ಯಪರಂಪರೆಯ ಒಂದು ವಿಶಿಷ್ಟ ಸ್ವರೂಪವನ್ನು ನಾವು ಕಾರಣವೆಂದೂ ಹೇಳುತ್ತೇವೆ. ಹಿಂದೆ ಕೆಲವು ಕಾರ್ಯಪರಂಪರೆಗಳು ಹೀಗೆಯೇ ಸಂಭವಿಸಿದ್ದವು. ಈಗಲೂ ಆ ಪರಂಪರೆಯಲ್ಲಿಯ ಒಂದು ಕಾರ್ಯವು ಸಂಭವಿಸಿದ್ದನ್ನು ನೋಡಿದ ಕೂಡಲೇ ಉಳಿದ ಕಾರ್ಯಗಳೂ ಹಿಂದಿನಂತೆ ಸಂಭವಿಸುವವೆಂಬ ಅಪೇಕ್ಷೆ ನಮ್ಮ ಚಿತ್ತದಲ್ಲಿ ಉದ್ಭವಿಸುತ್ತದೆ. ಆ ಅಪೇಕ್ಷೆಗೇ ನಾವು ನಿಯಮವೆನ್ನುತ್ತೇವೆ. ಇದರಿಂದ ಸಿದ್ಧವಾಗುವುದೇನೆಂದರೆ, ಸೃಷ್ಟಿಯಲ್ಲಿ ನಿಯಮವೆಂಬುದೊಂದು ಇಲ್ಲವೇ ಇಲ್ಲ. ಆದ್ದರಿಂದ ಪೃಥ್ವಿಯ ಮಧ್ಯಬಿಂದುವಿನಲ್ಲಿ ಗುರುತ್ವಾಕರ್ಷಣಶಕ್ತಿ ಇರುವುದು ಒಂದು ನಿಯಮವೆಂದು ಹೇಳುವುದು ತಪ್ಪು. ಇಷ್ಟೇ ಅಲ್ಲ, ಸೃಷ್ಟಿಯಲ್ಲಿ ಇಂಥ ಒಂದು ಪದಾರ್ಥವು ಇಂಥ ಒಂದು ನಿಯಮದಿಂದ ಬದ್ಧವಾಗಿರುತ್ತದೆಂದು ಹೇಳುವಂತಿಲ್ಲ. ಕೆಲವು ಕಾರ್ಯಪರಂಪರೆಗಳ ಕಡೆಗೆ ವಿಶಿಷ್ಟರೀತಿಯಿಂದ ನೋಡುವ ರೂಢಿ ನಮಗೆ ಬಂದಿರುತ್ತದೆ. ಒಂದು ಕಾರ್ಯಪರಂಪರೆ ಒಂದೇ ವಿಶಿಷ್ಟ ರೀತಿಯಲ್ಲಿ ಸಂಭವಿಸುವುದೆಂಬ ಅನುಭವವು ನಮಗಾಯಿತೆಂದರೆ, ಆ ರೀತಿಯನ್ನು ಅಥವಾ ಪದ್ಧತಿಯನ್ನು ನಿಯಮವೆಂದು ಹೇಳುತ್ತೇವೆ. ಆ ವಸ್ತು ಆ ನಿಯಮದಿಂದ ಬದ್ಧವಾಗಿರದೆ ಆ ನಿಯಮದ ಪ್ರಾಪ್ತಿ ನಮ್ಮ ಚಿತ್ತದಲ್ಲಿರುತ್ತದೆಂದು ಸಿದ್ಧವಾಗುತ್ತದೆ.

ಕೆಲವು ನಿಯಮಗಳು ವಿಶ್ವವ್ಯಾಪಿಯಾಗಿರುತ್ತವೆಂದು ನಾವು ತಿಳಿಯುತ್ತೇವೆ. ಅವುಗಳ ಅರ್ಥವೇನೆಂಬುದನ್ನು ನೋಡೋಣ. ವಿಶ್ವವೆಂದರೆ ಏನೆಂಬುದನ್ನು ಮೊದಲು ನಾವು ನಿಶ್ಚಯಿಸಬೇಕು. ದೇಶ ಕಾಲ ನಿಮಿತ್ತಗಳೆಂಬ ಉಪಾಧಿತ್ರಯಗಳಿಂದ ಮರ್ಯಾದಿತವಾದ ಅಸ್ತಿತ್ವದ ಭಾಗಕ್ಕೆ ವಿಶ್ವವೆಂಬ ಹೆಸರಿದೆ. ಅಸ್ತಿತ್ವವು ಒಟ್ಟಾರೆ ಅನಂತವಾದುದು. ಅದರೊಳಗಿನ ಕೆಲಭಾಗವು ದೇಶ ಕಾಲ ನಿಮಿತ್ತಗಳೆಂಬ ಉಪಾಧಿಗಳಿಂದ ಬಿಗಿಯಲ್ಪಟ್ಟಂತೆ ತೋರುತ್ತದೆ. ಅದಕ್ಕೇ ವಿಶ್ವವೆಂಬ ಸಂಜ್ಞೆ. ಈ ತ್ರಿವಿಧ ಉಪಾಧಿವಿರಹಿತವಾದ ಅನಂತ ಅಸ್ತಿತ್ವವು ಅದರಾಚೆಗಿರುವುದು. ನಾವು ನಿಯಮ ಅಥವಾ ಕಟ್ಟಳೆಯೆಂದು ಹೇಳುವುದರ ಅಸ್ತಿತ್ವವು ವಸ್ತುತಃ ಇರದೆ ನಮ್ಮ ಮನಸ್ಸಿನಲ್ಲಿಯೇ ಇರುತ್ತದೆಂದು ಆಗಲೇ ಸಿದ್ಧವಾಗಿದೆ. ಆದ್ದರಿಂದ ವಿಶ್ವವ್ಯಾಪಿಯಾದ ನಿಯಮ ಅಥವಾ ಕಟ್ಟಳೆಯ ಅಸ್ತಿತ್ವವು ದೇಶ ಕಾಲ ನಿಮಿತ್ತಗಳೆಂಬ ಉಪಾಧಿಗಳಿಂದ ಕಟ್ಟಲ್ಪಟ್ಟ ವಿಶ್ವದಲ್ಲಿಯೇ ಇರುವುದು ಶಕ್ಯವಿದೆ. ಈ ಉಪಾಧಿತ್ರಯದ ಹೊರಗಿನ ಅಸ್ತಿತ್ವದಲ್ಲಿ ಈ ನಿಯಮವಿರುವುದು ಶಕ್ಯವಿಲ್ಲ. ವಿಶ್ವವೆಂಬುದು ವ್ಯಷ್ಟಿರೂಪವಾಗಿದೆ. ವ್ಯಷ್ಟಿಯೆಂದರೆ ಅನೇಕಗಳಲ್ಲಿ ಒಂದು. ಊರು ಸಮಷ್ಟಿ; ಊರೊಳಗಿನ ಮನೆ ವ್ಯಷ್ಟಿ. ಅರಣ್ಯವು ಸಮಷ್ಟಿ; ಅರಣ್ಯದೊಳಗಿನ ಒಂದು ಗಿಡವು ವ್ಯಷ್ಟಿ. ಅದರಂತೆ ಅನಂತವಾದ ಅಸ್ತಿತ್ವದಲ್ಲಿ ನಮ್ಮ ಮನಸ್ಸಿನ ತೆಕ್ಕೆಯಲ್ಲಿ ಸಿಕ್ಕ ಭಾಗಕ್ಕೆ ಮಾತ್ರ ವಿಶ್ವವೆಂದೆನ್ನುತ್ತೇವೆ. ಆದ್ದರಿಂದ ಅನಂತ ಅಸ್ತಿತ್ವವು ಸಮಷ್ಟಿರೂಪ; ವಿಶ್ವವು ವ್ಯಷ್ಟಿರೂಪ. ನಾವು ಕಾಣುವುದು ಮುಟ್ಟುವುದು ಕೇಳುವುದು ಯೋಚಿಸುವುದು ಕಲ್ಪನೆಮಾಡುವುದು ಮುಂತಾದ ಈ ಎಲ್ಲ ಅಸ್ತಿತ್ವಕ್ಕೆ ನಾವು ವಿಶ್ವವೆಂಬ ಸಂಕಲಿತ ಸಂಜ್ಞೆಯನ್ನು ಹಚ್ಚುತ್ತೇವೆ. ನಾವು ನಿಯಮ ಅಥವಾ ಕಟ್ಟಳೆಯೆಂದು ಹೇಳುವಂತಹದು ಈ ವಿಶ್ವವನ್ನು ಮಾತ್ರ ವ್ಯಾಪಿಸಿಕೊಂಡಿರುವುದು ಸ್ಪಷ್ಟವಿದೆ. ಅದರಾಚೆಗಿರುವ ಅಸ್ತಿತ್ವದಲ್ಲಿ ನಮ್ಮ ಮನಸ್ಸು ಕಲ್ಪನೆಯಿಂದ ಕೂಡ ಪ್ರವೇಶಿಸಲಾರದು. ಅಂಥಲ್ಲಿ ನಮ್ಮ ನಿಯಮ ಅಥವಾ ಕಟ್ಟಳೆ ವ್ಯಾಪಿಸುವುದು ಹೇಗೆ? ಅಲ್ಲಿ ಸಂಭವಿಸುವ ಕಾರ್ಯಪರಂಪರೆಗಳಿಗೆ ಹೋಲಿಸಿ ನೋಡಲು ಅದಕ್ಕೆ ಸದೃಶವಾದ ಪರಂಪರೆ ನಮ್ಮ ಮನಸಿನಲ್ಲಿಯೇ ಸಿದ್ಧವಿಲ್ಲ. ಇಂಥ ಕಾರಣದಿಂದ ಇಂಥ ಕಾರ್ಯವಾಯಿತೆಂದು ಹೇಳಲು ನಮಗೆ ಅಲ್ಲಿ ಯಾವ ಸಾಧನವೂ ದೊರಕು

ವುದಿಲ್ಲ. ಆದ್ದರಿಂದ ಯಾವುದೇ ವಸ್ತುವು ನಾಮರೂಪವನ್ನು ಧರಿಸಿದ ಮೇಲೆಯೇ ನಿಯಮ ಅಥವಾ ಕಟ್ಟಳೆಯ ಕಟ್ಟಿನಲ್ಲಿ ಬರುವುದೆಂಬುದು ಸ್ಪಷ್ಟವಿದೆ. ನಮ್ಮ ಮನಸ್ಸಿಗೆ ನಿಲುಕಲು ಕೂಡ ಶಕ್ಯವಿಲ್ಲದಿದ್ದಲ್ಲಿ ದೇಶ ಕಾಲ ನಿಮಿತ್ತಗಳ ಉಪಾಧಿಯಿರಲು ಶಕ್ಯವಿಲ್ಲ; ನಾಮರೂಪಗಳೂ ಇರುವುದಿಲ್ಲ. ಇಷ್ಟರಿಂದಲೇ ಇನ್ನೊಂದು ಮಾತು ಸಿದ್ಧವಾಗುವುದು. ಸ್ವತಂತ್ರ ಇಚ್ಛೆಯೆಂದು ನಾವು ಹೇಳುವ ಒಂದು ವಿಶಿಷ್ಟ ಮನಸ್ಸಿಗೆ ನಿಜವಾದ ಅಸ್ತಿತ್ವವೇ ಇಲ್ಲ. 'ಸ್ವತಂತ್ರ' ಮತ್ತು 'ಇಚ್ಛೆ' ಇವೆರಡೂ ಶಬ್ದಗಳನ್ನು ಒಂದೆಡೆಯಲ್ಲಿ ಕೂಡಿಸಿ ಉಚ್ಚರಿಸುವುದು ಏನೋ ಒಂದು ಅರ್ಥವಿಲ್ಲದ ಮಾತನ್ನು ಹೇಳಿದಂತೆ. 'ಸ್ವತಂತ್ರ' ಮತ್ತು 'ಇಚ್ಛೆ' ಇವೆರಡೂ ಶಬ್ದಗಳು ಪರಸ್ಪರ ವಿರುದ್ಧಾರ್ಥವನ್ನು ತೋರಿಸುತ್ತವೆ. ಇಚ್ಛೆಯ ಅಸ್ತಿತ್ವವು ಕಲ್ಪನೆಯನ್ನವಲಂಬಿಸಿರುತ್ತದೆ. ಕಲ್ಪನೆ ವಿಶ್ವದಿಂದ ಮರ್ಯಾದಿತವಾಗಿರುವದು; ವಿಶ್ವವು ದೇಶಕಾಲನಿಮಿತ್ತಗಳಿಂದ ಬದ್ಧವಾಗಿರುವದು. ಇಂಥ ಬದ್ಧವಸ್ತು ಸಂಘದೊಳಗಿಂದ ಮುಕ್ತ ಸ್ವತಂತ್ರ ಇಚ್ಛೆ ಹೇಗೆ ನಿರ್ಮಾಣವಾದೀತು? ಯಾವ ವಸ್ತುವಿನ ವಿಷಯವಾಗಿ ನಮಗೆ ಜ್ಞಾನವಾಗಿರುವುದೋ ಅಥವಾ ಆಗುವ ಸಂಭವವಿರುವುದೋ, ಆ ಎಲ್ಲ ವಸ್ತುಗಳೂ ಆ ಎಲ್ಲ ಜ್ಞಾನವೂ ಪೂರ್ವದ ನಿಮಿತ್ತದಿಂದಲೇ ಉದ್ಭವಿಸಿರುತ್ತವೆ. ಅವು ಸ್ವತಂತ್ರವಾಗಿರುವುದು ಶಕ್ಯವಿಲ್ಲ. ಇಂದು ಕಾರ್ಯರೂಪದಲ್ಲಿರುವ ವಸ್ತುವಿನ ಮೇಲೆ ಎರಡನೆಯ ಯಾವುದಾದರೊಂದು ವಸ್ತುವಿನ ಆಘಾತವಾಗಿ ಅದು ಸ್ವತಃ ಕಾರಣರೂಪವಾಗುವ ಸಂಭವವಿರುವುದು. ಆದ್ದರಿಂದ ವಸ್ತುನಿರ್ಮಿತ ಜ್ಞಾನವು ಸ್ವತಂತ್ರವಲ್ಲ. ವಸ್ತುವಿನ ಆಘಾತದಿಂದ ಜ್ಞಾನರೂಪವನ್ನು ಧಾರಣ ಮಾಡಿದಂಥ ಆ ಮೂಲ ರೂಪವು ಸ್ವತಂತ್ರವಿರುತ್ತದೆ. ಈ ಜ್ಞಾನವು ದೇಶ ಕಾಲ ನಿಮಿತ್ತಗಳ ಉಪಾಧಿಯೊಳಗಿಂದ ಪಾರಾದಾಗ ಸ್ವತಂತ್ರವಾಗುತ್ತದೆ; ಎಂದರೆ ತನ್ನ ಮೂಲ ರೂಪದೊಡನೆ ಏಕಜೀವವಾಗುತ್ತದೆ. ಮೂಲತಃ ಅದು ಸ್ವತಂತ್ರವೇ. ಆದರೆ ಅದೇ ದೇಶ ಕಾಲ ನಿಮಿತ್ತಗಳಿಂದ ಬದ್ಧವಾಗಿ ವಸ್ತು ಮತ್ತು ಜ್ಞಾನ ಇವುಗಳ ಸ್ವರೂಪವನ್ನು ತಾಳುತ್ತದೆ. ಈ ದೇಶ ಕಾಲ ನಿಮಿತ್ತಗಳ ಅಸ್ತಿತ್ವವು ಮುಗಿಯಿತೆಂದರೆ ಅದರ ಕೂಡ ಪಾರತಂತ್ರ್ಯವೂ ನಷ್ಟವಾಗಿ ಸ್ವತಂತ್ರವಾದ ಮೂಲರೂಪವನ್ನು ಹೊಂದುತ್ತದೆ.

ಈ ವಿಶ್ವವು ಎಲ್ಲಿಂದ ಹುಟ್ಟಿಬಂತು, ಅದರ ಅಸ್ತಿತ್ವವು ಏನನ್ನವಲಂಬಿ

ಸಿದೆ, ಅದರ ಪರ್ಯವಸಾನವೆಲ್ಲಿ, ಮುಂತಾದ ವಿಚಾರಗಳು ಮೇಲಿಂದ ಮೇಲೆ ಉದ್ಭವಿಸುತ್ತವೆ. ಅದಕ್ಕೆ ಉತ್ತರವಿಷ್ಟೇ: ವಿಶ್ವದ ಉತ್ಪತ್ತಿ ಪೂರ್ಣದಿಂದ ಆಗಿದ್ದು ಬದ್ಧತೆ ಅಥವಾ ಸ್ಥಿತಿ ಅಸ್ತಿತ್ವವು; ಅದರ ಮತ್ತು ಪೂರ್ವದ ಪೂರ್ಣ ವ್ಯವಸ್ಥೆಯಲ್ಲಿ ಅದರ ಲಯವಾಗುವದು. ಮನುಷ್ಯನು ಪೂರ್ಣನೆಂದು ಹೇಳುವಾಗ, ಈ ಅನಂತ ಅಸ್ತಿತ್ವದ ಒಂದು ಅತ್ಯಂತ ಸೂಕ್ಷ್ಮ ಭಾಗವನ್ನು ಕುರಿತೇ ಮಾತಾಡುವುದು ನಮ್ಮ ಮನಸ್ಸಿನಲ್ಲಿರುತ್ತದೆಂಬುದನ್ನು ಮರೆಯಲಾಗದು. ನಮ್ಮ ದೃಷ್ಟಿಗೆ ಕಾಣುವ ಈ ಶರೀರ ಮತ್ತು ಈ ಮನಸ್ಸು ಈ ಅನಂತ ಅಸ್ತಿತ್ವದೊಳಗಿನ ಒಂದು ಸೂಕ್ಷ್ಮಬಿಂದುವಿನಷ್ಟಿರುತ್ತವೆ. ಅದೇಕೆ, ಈ ಸರ್ವ ವಿಶ್ವವೂ ಅನಂತ ಅಸ್ತಿತ್ವದ ಒಂದು ಸೂಕ್ಷ್ಮ ಅಂಶ. ನಮ್ಮ ಎಲ್ಲ ಕಟ್ಟಳೆ, ನಿಯಮ, ಬಂಧನ, ಸುಖದುಃಖ, ಆಸೆ ಇವೆಲ್ಲ ಎಷ್ಟೇ ವಿಶಾಲವಾದರೂ ಈ ಬಿಂದುರೂಪ ವಿಶ್ವದಾಚೆಗೆ ಹೋಗಲಾರವು. ನಮ್ಮ ಎಲ್ಲ ಸಂಸ್ಕೃತಿ ವಿಕೃತಿಗಳು ಈ ಸೂಕ್ಷ್ಮ ಬಿಂದುವಿನಲ್ಲಿ ಸಂಗ್ರಹಿಸಲ್ಪಟ್ಟಿವೆ. ಆದ್ದರಿಂದ ನಮ್ಮ ಚಿತ್ತದಾಚೆಗೆ ಅಸ್ತಿತ್ವವಿಲ್ಲದಂಥ ಈ ಸರ್ವ ವಿಶ್ವವು ಹೀಗೆ ನಡೆಯಬೇಕೆಂದು ಅಪೇಕ್ಷಿಸುವುದೂ, ಸ್ವರ್ಗಸುಖಭೋಗವನ್ನು ಬಯಸುವುದೂ ಎಷ್ಟು ತಿಳಿಗೇಡಿತನದ್ದೆಂಬುದನ್ನು ನೀವೇ ಯೋಚಿಸಿರಿ. ಸ್ವರ್ಗಸುಖವೆಂದರೇನು ?– ಇದೇ ಪ್ರಪಂಚವನ್ನು ಸುಧಾರಿಸಿ ಬೆಳೆಸಿದ ಎರಡನೇ ಆವೃತ್ತಿ. ಯಾವುದಕ್ಕೆ ಕಟ್ಟಳೆ ಅಥವಾ ನಿಯಮಗಳೆಂಬ ದೊಡ್ಡ ಹೆಸರುಗಳನ್ನು ಕೊಟ್ಟಿರುವೆವೋ ಮತ್ತು ಯಾವುದನ್ನು ಈ ಬಿಂದುರೂಪ ವಿಶ್ವವು ಅವಲಂಬಿಸಿರುತ್ತದೆಂದು ನಾವು ತಿಳಿಯುವೆವೋ ಅದರ ಆಧಾರದಿಂದ ಅನಂತ ಅಸ್ತಿತ್ವದ ನಿಯಮವನ್ನು ನಿರ್ಣಯಿಸಹೋಗುವುದು ಎಷ್ಟು ಅಶಕ್ಯವೂ ಹುಡುಗತನದ್ದೂ ಇರುತ್ತದೆಂಬುದು ನಿಮಗೆ ಚನ್ನಾಗಿ ಮನವರಿಕೆಯಾಗಿರಬಹುದು. ಈ ಬಿಂದುರೂಪ ವಿಶ್ವದಲ್ಲಿಯೇ ಬಂಧಿಸಲ್ಪಟ್ಟು ಕುಳಿತು ಪುನಃ ಪುನಃ ಚರ್ವಿತಚರ್ವಣ ಮಾಡುವ ಬಯಕೆ ಯಾರಿಗಿರುವುದೋ ಮತ್ತು ಈ ಬಯಕೆಯನ್ನು ಹಣ್ಣಿಸುವಂಥ ಅನುಕೂಲತೆಯ ಧರ್ಮಮಾರ್ಗವು ಯಾರಿಗೆ ಬೇಕಾಗಿರುವುದೋ ಅವರ ಬುದ್ಧಿ ಕೆಟ್ಟಿರುವುದೆಂದು ನಿಶ್ಚಿತವಾಗಿ ತಿಳಿದುಕೊಳ್ಳಿರಿ. ನಮ್ಮ ಸದ್ಯದ ಸ್ಥಿತಿಗಿಂತ ಉಚ್ಚತರ ಸ್ಥಿತಿಯಿರುವುದು ಶಕ್ಯವೆಂಬ ಕಲ್ಪನೆಯೂ ಅವರ ಮನಸ್ಸಿನಲ್ಲಿ ಬರುವುದಿಲ್ಲ. ಅವರ ದೃಷ್ಟಿಯಲ್ಲಿ ಸದ್ಯದ ಸ್ಥಿತಿಯೇ ಮಾನವೀ ಜೀವಿತದ ಇತಿ

ಕರ್ತವ್ಯ. ಅವರಿಗೆ ತಮ್ಮ ಮೂಲ ಅನಂತರೂಪದ ವಿಸ್ಮರಣೆ ಪೂರ್ಣವಾಗಿರುತ್ತದೆ. ಈ ಕ್ಷಣದಲ್ಲಿ ಅನುಭವಕ್ಕೆ ಬರುವಂಥ ಸುಖದುಃಖಗಳ ಹೊರತಾದ ಬೇರೆ ಒಂದು ಸ್ಥಿತಿ ಇರುವುದೆಂದು ಅವರ ಕನಸುಮನಸಿನಲ್ಲಿಯೂ ಬರುವುದಿಲ್ಲ. ದಿನಾಲು ಅನೇಕ ವಸ್ತುಗಳು ನಾಶಹೊಂದುತ್ತಿದ್ದರೂ ಅದನ್ನು ಅವರು ಕಣ್ಣಾರೆ ನೋಡುತ್ತಿದ್ದರೂ ಆ ವಸ್ತುಗಳು ಶಾಶ್ವತವಾಗಿರುವವೆಂಬ ಕಲ್ಪನೆಗೆ ಗಟ್ಟಿಯಾಗಿ ಅಂಟಿಕೊಂಡಿರುತ್ತಾರೆ. ಬಾಯಾರಿಕೆ, ಬಾಯಾರಿಕೆ ಎಂದು ಒಂದೇ ಸಮನೆ ಕೂಗಿಟ್ಟು ಮೃಗಜಲವನ್ನು ಕುಡಿಯುತ್ತಾರೆ. ನಮ್ಮ ಬಿಂದುಮಾತ್ರವಿದ್ದ ವಿಶ್ವದಾಚೆಗೆ ಅನಂತ ಅಸ್ತಿತ್ವವಿರುತ್ತದೆ. ಅದರಲ್ಲಿ ಅನಂತ ಸುಖಕರವಾದ ವಸ್ತುಗಳು ತುಂಬಿರುತ್ತವೆ; ಅಲ್ಲಿ ಅನಂತ ಜೀವಗಳಿವೆ; ಅಲ್ಲಿ ಅನೇಕ ತರದ ಕಾಯಿದೆ, ಅನಂತ ರಾಷ್ಟ್ರಗಳು ಅನಂತ ಸಂಸ್ಕೃತಿಗಳಿರುತ್ತವೆ. ಈ ಎಲ್ಲ ಅನಂತ ಅಸ್ತಿತ್ವವು ನಮ್ಮ ವಿಶ್ವದ ಹೊರಗಿರುತ್ತದೆ. ನಮ್ಮ ವಿಶ್ವವು ಇನ್ನೂ ಎಷ್ಟು ವಿಸ್ತಾರವಿರುವುದೆಂಬುದರ ಕಲ್ಪನೆ ನಿಮಗೆ ತಕ್ಕಮಟ್ಟಿಗಾದರೂ ಆಗಬಹುದು. ಈ ದೊಡ್ಡ ವಿಸ್ತಾರವು ಕೂಡ ನಮ್ಮ ಸ್ವಂತ ಅನಂತತ್ವದ ಒಂದು ಸಣ್ಣ ಭಾಗ.

ನಾವು ಸ್ವಾತಂತ್ರ್ಯವನ್ನು ಅಥವಾ ಮುಕ್ತಿಯನ್ನು ಗಳಿಸಬೇಕಾಗಿದ್ದರೆ ಈ ವಿಶ್ವವೆಂಬ ಬಂಧನದಿಂದ ಹೊರಬೀಳದೆ ಗತ್ಯಂತರವಿಲ್ಲ. ಆ ಮುಕ್ತಿಯು ಈ ದೃಶ್ಯವಿಶ್ವದಲ್ಲಿ ಸಿಗುವುದಿಲ್ಲ, ಅದೃಶ್ಯಸ್ವರ್ಗದಲ್ಲಿಯೂ ಸಿಗುವುದಿಲ್ಲ. ಅದರಂತೆ ನಮ್ಮ ಕಲ್ಪನಾಶಕ್ತಿಯು ಹೋಗಿ ಮುಟ್ಟುವ ಎಡೆಯಲ್ಲೆಲ್ಲ ಹುಡುಕಿದರೂ ಮುಕ್ತಿ ದೊರಕುವುದಿಲ್ಲ. ಯಾವುದಾದರೊಂದು ತರದ ಸ್ವರ್ಗವನ್ನು ಅಥವಾ ಲೋಕವನ್ನು ಕಲ್ಪಿಸಿಕೊಂಡರೂ ಅದು ಕಲ್ಪನೆಯದೇ ಆದುದರಿಂದ ಆ ಲೋಕವು ನಮ್ಮ ವಿಶ್ವದಲ್ಲಿಯೇ ಅಂತರ್ಭೂತವಾಗಬೇಕು. ವಿಶ್ವವಾದರೋ ಮೊದಲೇ ದೇಶ ಕಾಲ ನಿಮಿತ್ತಗಳಿಂದ ಬದ್ಧವಾದದ್ದು. ಇದಲ್ಲದೆ ಈ ಜಗತ್ತಿನ ಹೊರತು ಮತ್ತೆ ಬೇರೆ ಬೇರೆ ತರದ ಜಗತ್ತುಗಳು ಇರಲು ಶಕ್ಯವಿದೆ. ಅಲ್ಲಿ ಇಲ್ಲಿಗಿಂತಲೂ ಅಧಿಕವಾದ ಸುಖಕರ ವಸ್ತುಗಳಿರುವುದೂ ಶಕ್ಯವಿದೆ. ಆದರೆ ಅವುಗಳ ಅಸ್ತಿತ್ವವು ಈ ವಿಶ್ವದಾಚೆಗೆ ಇರುವುದು ಶಕ್ಯವಿಲ್ಲ, ಮತ್ತು ಅವು ಕೂಡ ದೇಶ ಕಾಲ ನಿಮಿತ್ತಗಳಿಂದ ಬದ್ಧವಾಗಿದ್ದು, ವಿಶ್ವದ ಇವೇ ಕಟ್ಟಳೆ ಅಥವಾ ನಿಯಮಗಳಿಂದ ಬಿಗಿಯಲ್ಪಟ್ಟಿರಬೇಕು. ಆದ್ದರಿಂದ ನಾವು ಮುಕ್ತಿಮಾರ್ಗವನ್ನು ಈ ವಿಶ್ವದ ಹೊರಗೇ

ಶೋಧಿಸಿಕೊಳ್ಳಬೇಕು. ವಿಶ್ವವು ಕೊನೆಗಂಡಾಗಲೇ ನಿಜವಾದ ಧರ್ಮ ಮಾರ್ಗದ ಆರಂಭವಾದಂತಾಯಿತು. ನಾವು ಜೀವಿತ ತೃಷ್ಣೆಯಿಂದ ಬಿಡುಗಡೆ ಹೊಂದದೆ ಇರುವ ವರೆಗೂ, ಈ ಕ್ಷುದ್ರ ಸುಖದ ಕಲ್ಪನೆಗೆ ತಿಲಾಂಜಲಿ ಕೊಡದ ವರೆಗೂ ಸ್ವಪ್ನದಲ್ಲಿ ಕೂಡ ಮುಕ್ತಿ ಮಾರ್ಗವನ್ನು ಕಾಣಲಾರೆವು. ಮಾನವೀ ಜೀವಿತದ ನಿಜವಾದ ಉದ್ದೇಶವಾದ ಮುಕ್ತಿಯನ್ನು ಪಡೆಯುವುದಕ್ಕಾಗಿ ಬಂಧನಕಾರಕಗಳಾದ ಈ ವಿಶ್ವ, ಜಗತ್ತು, ಸ್ವರ್ಗಕಲ್ಪನೆ, ದೇಹ, ಮನಸ್ಸು, ಚಿತ್ತ ಮುಂತಾದುವನ್ನೆಲ್ಲ ಬಿಡಲೇಬೇಕು. ಇಂದ್ರಿಯಜನ್ಯ ಸುಖದ ಆಸಕ್ತಿ ಇಲ್ಲದಂತಾದ ಕ್ಷಣದಲ್ಲಿಯೇ ಮುಕ್ತಿದೇವಿ ನಮ್ಮ ಕೊರಳಲ್ಲಿ ಮಾಲೆ ಹಾಕುವಳು. ನಮನ್ನು ಈಗ ಬಿಗಿದು ಕಟ್ಟಿರುವ ಸರಪಳಿಯನ್ನು ಹರಿದು ಹಾಕುವ ಮಾರ್ಗವು ಒಂದೇ. ಕಲ್ಪನೆಯು ಪ್ರವೇಶಿಸಲು ಶಕ್ಯವಿದ್ದುದನ್ನೆಲ್ಲ ತ್ಯಜಿಸಿರಿ, ಕಲ್ಪನಾತೀತರಾಗಿರಿ. ಅಲ್ಲಿಗೆ ನೀವು ಮುಕ್ತರಾದಂತೆಯೇ.

ಕಲ್ಪನಾತೀತರಾಗಿರೆಂದು ಹೇಳುವುದು ಬಹು ಸುಲಭ, ಆಚರಿಸುವುದು ಅತ್ಯಂತ ಕಠಿಣ. ಸಾವಿರಾರು ಮನುಷ್ಯರಲ್ಲಿ ಒಬ್ಬನು ಮಾತ್ರ ಆ ಮಾರ್ಗವನ್ನು ಹಿಡಿಯುತ್ತಾನೆ. ಇಂಥ ಸಾವಿರಾರು ಮಾರ್ಗಸ್ಥರಲ್ಲಿ ಎಲ್ಲಿಯೋ ಒಬ್ಬನಿಗೆ ಯಶಸ್ಸು ದೊರೆಯುವುದು. ಇದಕ್ಕೆ ನಮ್ಮ ತತ್ವಜ್ಞಾನಿಗಳು ಎರಡು ಮಾರ್ಗಗಳನ್ನು ಹೇಳಿರುವರು. ಒಂದು 'ನೇತಿ' ಮಾರ್ಗ; ಮತ್ತೊಂದು 'ಇತಿ' ಮಾರ್ಗ. ಮೊದಲನೆಯದು ನಿಷೇಧ ರೂಪ; ಎರಡನೆಯದು ವಿಧಿ ರೂಪ. ಮೊದಲನೆಯ ನಿಷೇಧರೂಪ ಮಾರ್ಗವು ಅತ್ಯಂತ ದುರ್ಗಮವಾದದ್ದು. ಅದ್ವಿತೀಯ ಮನಸ್ಥಿತಿಯೂ ಪ್ರಚಂಡ ಇಚ್ಛಾಶಕ್ತಿಯೂ ಪ್ರಾಪ್ತವಾಗಿರುವವನು ಮಾತ್ರ ಆ ಮಾರ್ಗದಲ್ಲಿ ಹೆಜ್ಜೆಯನ್ನಿಕ್ಕಬಲ್ಲ. ಯಾವುದೊಂದು ಸುಖೇಚ್ಛೆಯು ಹುಟ್ಟುತ್ತಿರುವುದರೊಳಗೇ 'ಹೋಗು, ನನಗೆ ನೀನು ಬೇಕಿಲ್ಲ' ಎಂದು ಅವನು ಹೇಳುತ್ತಾನೆ. ಶರೀರಮನಸ್ಸುಗಳೆರಡೂ ಅವನ ಆಜ್ಞೆಯನ್ನು ಅಕ್ಷರಶಃ ಪಾಲಿಸುತ್ತವೆ. ಆದರೆ ಇಂಥ ಪ್ರಚಂಡ ಶಕ್ತಿಯುಳ್ಳವರು ಎಷ್ಟು ಜನ? ಅಂಥವರು ಅತಿ ವಿರಳರೇ ಸರಿ. ಆದ್ದರಿಂದ ಬಹುತರವಾಗಿ ಎಲ್ಲರೂ ಎರಡನೇ ಮಾರ್ಗವನ್ನೇ ಹಿಡಿಯುತ್ತಾರೆ. ಪ್ರಪಂಚದೊಳಗಿನ ಬಂಧನಗಳನ್ನೆಲ್ಲ ಕಂಡುಹಿಡಿದು, ಯೋಚನೆ ಮಾಡಿ, ಆ ಬಂಧನಗಳ ಉಪಯೋಗವನ್ನು ಮಾಡಿಕೊಂಡೇ ಬಂಧಮುಕ್ತರಾಗಲು ಅವರು ಯತ್ನಿಸು

ತ್ತಾರೆ. ಒಂದು ಮುಳ್ಳನ್ನು ಮತ್ತೊಂದು ಮುಳ್ಳಿನಿಂದ ಹೊರಗೆ ತೆಗೆದು ಕೊನೆಗೆ ಎರಡನ್ನೂ ಎಸೆದುಬಿಡುವಂತೆ ಒಂದು ಬಂಧನದಿಂದ ಉಳಿದ ಬಂಧನವನ್ನು ಕಿತ್ತಿಸೆದು, ಕೊನೆಗೆ ಎಲ್ಲ ಬಂಧನಗಳಿಂದಲೂ ಬಿಡುಗಡೆ ಯಾಗಲು ಶಕ್ತರಾಗುತ್ತಾರೆ. ವಸ್ತುತಃ ಇದೂ ತ್ಯಾಗಮಾರ್ಗವೇ ಸರಿ. ಅದು ಕೊನೆಗಾಣುವುದೂ 'ನೇತಿ' ಮಾರ್ಗದಲ್ಲಿಯೇ. ಆದರೆ ಅದು ಬಹಳ ನಿದಾನವಾದುದರಿಂದ ಬಹಳ ಕಷ್ಟದಾಯಕವಾಗುವುದಿಲ್ಲ. ಪ್ರಪಂಚದೊಳ ಗಿನ ವಸ್ತುಗಳನ್ನು ನಿರೀಕ್ಷಿಸಿ ಯೋಚಿಸಿ ಉಪಭೋಗಿಸಿ, ಅವುಗಳ ಸುಖ ವನ್ನುಂಡು ಆ ಸುಖದ ನಿಜವಾದ ಯೋಗ್ಯತೆ ಏನೆಂಬುದನ್ನು ಬೆಲೆಕಟ್ಟಿ ಅವುಗಳ ಅನುಭವವನ್ನು ಪಡೆಯುತ್ತ ಮೆಲ್ಲಮೆಲ್ಲನೆ ಅವುಗಳಿಂದ ಮನ ಸ್ಸನ್ನು ಕಿತ್ತುಕೊಳ್ಳುವುದೇ ಈ 'ಇತಿ' ಮಾರ್ಗವು. ಮೊದಲನೇ ಮಾರ್ಗವು ವಿವೇಕ ಪ್ರಧಾನ; ಎರಡನೆಯದು ಕರ್ಮಯೋಗಪರ, ಅನುಭವಪ್ರಧಾನ. ಮೊದಲನೆಯ ಮಾರ್ಗಕ್ಕೆ ಜ್ಞಾನಯೋಗವೆಂದು ಹೆಸರು. ಇದರಲ್ಲಿ ಪೂರ್ಣ ವಿವೇಕದಿಂದ ಕರ್ಮಸನ್ಯಾಸವನ್ನು ಹಿಡಿಯಬೇಕಾಗುತ್ತದೆ. ಯಾವ ಕರ್ಮ ವನ್ನೂ ಮಾಡತಕ್ಕದ್ದಲ್ಲವೆಂದು ಬುದ್ಧಿಯನ್ನು ವಿವೇಕದಿಂದ ನಿಶ್ಚಿತಗೊಳಿಸ ಬೇಕು. ಎರಡನೆಯ ಮಾರ್ಗದಲ್ಲಿ ಕರ್ಮ ಬಿಡುವ ಕಾರಣವಿಲ್ಲ. ವಿಶ್ವ ದೊಳಗಿನ ಪ್ರತಿಯೊಂದು ಪ್ರಾಣಿ ಒಂದಿಲ್ಲೊಂದು ಕರ್ಮವನ್ನು ಮಾಡುತ್ತಲೇ ಇರಬೇಕಾಗುತ್ತದೆ. ಅಂತರಂಗದಲ್ಲಿಯೇ ಸಂತುಷ್ಟಿಹೊಂದಿದವನ ಮಾತು ಬೇರೆ. ಅಂಥವನಿಗೆ ಆತ್ಮಜ್ಞಾನವನ್ನು ಬಿಟ್ಟು ಉಳಿದ ಯಾವ ವಾಸನೆಯೂ ಇರುವುದಿಲ್ಲ. ಆದ್ದರಿಂದ ಸ್ವಸ್ವರೂಪವನ್ನು ಬಿಟ್ಟು ಅವನ ಮನಸ್ಸು ಬಾಹ್ಯ ಜಗತ್ತಿನಲ್ಲಿ ಎಂದೂ ತೊಡಗುವುದಿಲ್ಲ. ಆವನು ಬಾಹ್ಯ ವಸ್ತುಗಳಲ್ಲಿ ಏನನ್ನೂ ಬಯಸದಿರುವುದರಿಂದ ಅವನ ಬುದ್ಧಿ ಅಂತರ್ಮುಖತ್ವವನ್ನು ಎಂದೂ ಬಿಡುವುದಿಲ್ಲ. ಇಂಥ ಪುರುಷನು ಮಾತ್ರ ಯಾವ ಕರ್ಮವನ್ನೂ ಅವಲಂಬಿಸುವ ಕಾರಣವಿಲ್ಲ. ಲೋಕಕಲ್ಯಾಣಾರ್ಥವಾಗಿ ಅನ್ಯತರದ ಕರ್ಮ ಮಾಡುವ ಮಾತು ಬೇರೆ. ಎತ್ತರವಾದ ಸ್ಥಳದಿಂದ ಕೊಳ್ಳದಲ್ಲಿ ಬೀಳುವ ತಡಸಲಿನ ನೀರು ಮೊದಲು ದೊಡ್ಡ ಹೊಂಡವನ್ನುಂಟು ಮಾಡಿ ಅದರಲ್ಲಿ ಚಕ್ರಾಕಾರವಾಗಿ ಕೆಲ ವೇಳೆ ತಿರುಗಿ ಆ ಮೇಲೆ ಹೊರಬೀಳುವಂತೆ ಮನು- ಷ್ಯನ ಸ್ಥಿತಿಯಾಗಿದೆ. ಮನುಷ್ಯನು ಜನ್ಮವೆತ್ತಿ ಬಂದಂದಿನಿಂದ ಈ ಸಂಸಾರ ಚಕ್ರರೂಪೀ ಮಡುವಿನಲ್ಲಿ ಕಳಚಿ ಬೀಳುತ್ತಾನೆ. ಅಲ್ಲಿ ಚಕ್ರಾಕಾರವಾಗಿ

ತಿರುಗುತ್ತಿರುವಾಗ ಒಬ್ಬನು ತಂದೆಯೆಂದೂ ಮತ್ತೊಬ್ಬನು ಅಣ್ಣನೆಂದೂ ತಮ್ಮನೆಂದೂ ಹೇಳಿಕೊಳ್ಳುತ್ತಾನೆ; 'ನಾನು, ನನ್ನ ಕೀರ್ತಿ, ನನ್ನ ಹೆಸರು' ಎಂದು ಅಭಿಮಾನದಿಂದ ಆಕ್ರೋಶ ಮಾಡುತ್ತಾನೆ. ಹೀಗೆ ಅನುಭವದಿಂದ ಬುದ್ಧಿಗಲಿತು ಕೊನೆಗೆ ಮುಕ್ತಸ್ಥಿತಿಯನ್ನು ಪುನಃ ಹೊಂದುತ್ತಾನೆ. ಇಡಿಯ ಪ್ರಪಂಚವೇ ಈ ಸ್ಥಿತಿಯಲ್ಲಿರುತ್ತದೆ. ನಮಗೆ ತಿಳಿದಿರಲಿ ತಿಳಿಯದಿರಲಿ, ನಾವೆಲ್ಲರೂ ಈ ಜಗದ್ರೂಪದ ಸ್ವಪ್ನದೊಳಗಿಂದ ಎಚ್ಚರಾಗಲು ಹವಣುತ್ತಿದ್ದೇವೆ. ಸಂಸಾರರೂಪದ ಈ ಮಡುವಿನಲ್ಲಿ ಸಿಲುಕಿಕೊಂಡು ಬಿದ್ದಾಗ ಆಗುವ ಅನುಭವದ ಉದ್ದೇಶವು ಅದರೊಳಗಿಂದ ಬಿಡುಗಡೆ ಹೊಂದಲು ಅನುಕೂಲವಾಗಬೇಕೆಂಬುದೇ ಇರುತ್ತದೆ.

ನಮ್ಮಲ್ಲಿ ಬಹು ಜನರಿಗೆ ಕರ್ಮಸನ್ಯಾಸವು ಶಕ್ಯವಾಗುವುದಿಲ್ಲ. ನಾವು ಕರ್ಮವನ್ನವಲಂಬಿಸಲೇ ಬೇಕು. ಕರ್ಮವನ್ನು ಬಿಡದೆ ಅದನ್ನು ಹಿಡಿದುಕೊಂಡೇ ಮುಕ್ತಿಯನ್ನು ಪಡೆಯುವ ಸಾಧನವು ನಮಗೆ ಬೇಕಾಗಿದೆ. ಕರ್ಮಯೋಗವು ಇಂಥ ಒಂದು ಸಾಧನೆ. ಕರ್ಮಯೋಗದಿಂದ ನಮಗೆ ಕರ್ಮಸನ್ಯಾಸದ ರಹಸ್ಯವು ಪ್ರಾಪ್ತವಾಗುತ್ತದೆ. ಇಡೀ ವಿಶ್ವವು ಕಾರ್ಯದಲ್ಲಿ ನಿರಂತರವಾಗಿ ತೊಡಗಿರುವುದನ್ನು ನಾವು ದಿನಾಲು ಕಣ್ಣಾರೆ ನೋಡುತ್ತೇವೆ. ಈ ಎಲ್ಲ ಕಾರ್ಯದ ಉದ್ದೇಶವೇನು? ಮುಕ್ತಿ, ಸ್ವಾತಂತ್ರ್ಯ ಇದೇ ಈ ಎಲ್ಲ ಕಾರ್ಯದ ಅಂತಿಮ ಗುರಿ. ಜಗತ್ತಿನೊಳಗಿನ ಅಣುರೇಣು ಮೊದಲುಗೊಂಡು ಮಹಾ ಪ್ರಾಣಿಯಾದ ಆನೆಯ ವರೆಗೆ ಎಲ್ಲವೂ ಕೇವಲ ಈ ಮುಕ್ತಿಗಾಗಿಯೇ ಹೋರಾಡುತ್ತಿವೆ. ಈ ಶರೀರಬಂಧನದೊಳಗಿಂದ ಪಾರಾಗಬೇಕು, ಮನೋಬಂಧನವನ್ನು ಹರಿದೊಗೆಯಬೇಕು, ಆತ್ಮನನ್ನು ಬಿಡುಗಡೆ ಮಾಡಬೇಕು ಎಂಬುದೇ ಈ ಎಲ್ಲ ಹೋರಾಟದ, ತಿಕ್ಕಾಟದ ಮತ್ತು ಚಟುವಟಿಕೆಯ ಗುರಿ. ಯಾವ ವಸ್ತುವಿನ ಗತಿಯನ್ನು ನೋಡಿದರೂ ಅದರ ಹೇತುವು ಇದೇ ಎಂದು ಗೊತ್ತಾಗುತ್ತದೆ. ಮುಕ್ತಿಯ, ಸ್ವಾತಂತ್ರ್ಯದ ಹೊರತು ಬೇರೆ ಉದ್ದೇಶವೇ ಅದಕ್ಕೆ ಇಲ್ಲ. ಸೂರ್ಯ, ಚಂದ್ರ, ಪೃಥ್ವಿ, ಮತ್ತು ಇತರ ಎಲ್ಲ ಗೋಲಗಳು ಕೂಡ ಬಂಧನದಿಂದ ಬಿಡುಗಡೆ ಹೊಂದುವುದಕ್ಕಾಗಿಯೇ ಪರಿಭ್ರಮಿಸುತ್ತಿರುತ್ತವೆ. ಸಶಾಸ್ತ್ರಜ್ಞಾನದ ಅಭಾವವಿದ್ದರೆ, ನಾವು ಅನಂತಕಾಲದ ವರೆಗೂ ಪ್ರವಾಸ ಮಾಡಬೇಕಾ

ಗುವುದು. ಎಷ್ಟೋ ವೇಳೆ ಏಟುಗಳನ್ನೂ ತಿನ್ನಬೇಕಾಗುವುದು. ಆದರೆ ಕರ್ಮಯೋಗದ ರಹಸ್ಯವು ಚನ್ನಾಗಿ ತಿಳಿದರೆ ಮಾತ್ರ ನಾವು ಈ ಎಲ್ಲ ಪೇಚಾಟದಿಂದ ಪಾರಾಗುತ್ತೇವೆ. ಕರ್ಮಯೋಗವು ಕರ್ಮರಹಸ್ಯವನ್ನು ಹೇಳುವ ಶಾಸ್ತ್ರ. ಕರ್ಮವನ್ನು ಮಾಡುಮಾಡುತ್ತಿರುವಾಗಲೇ ತನ್ನ ಶಕ್ತಿಯನ್ನು ಬೆಳೆಸಿಕೊಂಡು ಮುಕ್ತಿಗಾಗಿ ಅದನ್ನು ಹೇಗೆ ಬಳಸಿಕೊಳ್ಳಬೇಕೆಂಬ ಜ್ಞಾನವನ್ನೊದಗಿಸಿ ಕೊಡುವಂತಹದೇ ಕರ್ಮಯೋಗ. ನಮ್ಮ ಕರ್ಮವು ಶಾಸ್ತ್ರವಿರುದ್ಧವಾಗಿದ್ದರೆ, ಅಂಥ ಕರ್ಮವನ್ನು ಅನಂತಕಾಲದ ವರೆಗೆ ಮಾಡುತ್ತಿದ್ದರೂ ನಮ್ಮ ಶಕ್ತಿಯೆಲ್ಲ ಅನುಚಿತ ಸ್ಥಳದಲ್ಲಿ ವ್ಯರ್ಥ ವೆಚ್ಚವಾಗಿ ಮುಕ್ತಿಮಾರ್ಗದಲ್ಲಿ ಒಂದು ಹೆಜ್ಜೆಯನ್ನಾದರೂ ಇಕ್ಕಲು ನಾವು ಸಮರ್ಥರಾಗುವುದಿಲ್ಲ. ರಸಾಯನ ಶಾಸ್ತ್ರದ ಸಹಾಯದಿಂದ ಪದಾರ್ಥಗಳ ಯೋಗ್ಯ ಉಪಯೋಗವು ನಮಗೆ ತಿಳಿದುಬಂದು ಕ್ಷುದ್ರ ಪದಾರ್ಥ ಮೊದಲ್ಗೊಂಡು ಎಲ್ಲ ಪದಾರ್ಥಗಳನ್ನು ನಿರ್ಮಾಣ ಮಾಡುತ್ತೇವೆ. ಪದಾರ್ಥವಿಜ್ಞಾನ ಶಾಸ್ತ್ರದ ಸಹಾಯದಿಂದ ಅಲ್ಪ ಶಕ್ತಿಯಿಂದಲೇ ಪ್ರಚಂಡ ಕಾರ್ಯವನ್ನು ಲೀಲೆಯಿಂದ ಪಾರುಗಾಣಿಸಲು ಸಮರ್ಥರಾಗುತ್ತೇವೆ. ಆದರಂತೆ, ಕರ್ಮಯೋಗದ ಸಶಾಸ್ತ್ರಜ್ಞಾನದಿಂದ ಇಚ್ಛಾಶಕ್ತಿಯ ಯೋಗ್ಯಸಂಘಟನೆಯನ್ನು ಮಾಡಿಕೊಂಡು ನಾವು ಮುಕ್ತಿಯನ್ನು ಸಂಪಾದಿಸಲು ಸಮರ್ಥರಾಗುತ್ತೇವೆ. ಕರ್ಮತ್ಯಾಗದ ಪೂರ್ಣ ಫಲವನ್ನು ತಂದುಕೊಡುವ ಯಾವುದೊಂದು ಯುಕ್ತಿಯಿದ್ದರೆ ಅದು ನಮಗೆ ಬೇಕಾಗಿದೆ. ಈ ಜಗತ್ತು ನಾವು ಕೆಲಕಾಲ ವಿಶ್ರಾಂತಿಯನ್ನು ಪಡೆಯುವ ಸ್ಥಾನವೆಂಬುದನ್ನು ಒಪ್ಪಿಕೊಳ್ಳಬೇಕಾಗಿದೆ. ಇದು ನಮ್ಮ ನಿರಂತರವಾದ ವಾಸಸ್ಥಾನವಾಗಿರದೆ ಕೇವಲ ನಡುವೆ ಬರುವ ಒಂದು ನಿಲುಮನೆಯಂತಿರುವುದೆಂಬುದು ಪ್ರತಿ ಕ್ಷಣದ ನನ್ನು ಅನುಭವ. ಇಲ್ಲಿಂದ ಎಲ್ಲಿಯಾದರೂ ಅನ್ಯಸ್ಥಳಕ್ಕೆ ನಾವು ಹೋಗಲೇಬೇಕು. ಇಲ್ಲಿಯೇ ಇದ್ದು ಸ್ವಾತಂತ್ರ್ಯವನ್ನು ಪಡೆಯುವುದು ಶಕ್ಯವಿಲ್ಲೆಂಬ ಮಾತು ಕೂಡ ನಮಗೆ ಪ್ರತಿ ಕ್ಷಣದಲ್ಲಿ ಅನುಭವಕ್ಕೆ ಬರುತ್ತದೆ. ನಮಗೆ ಸ್ವಾತಂತ್ರ್ಯ ಅಥವಾ ಮುಕ್ತಿ ಬೇಕಾಗಿದ್ದರೆ, ಅದನ್ನು ಈ ಪ್ರಪಂಚದಾಚೆಗೆ ಎಲ್ಲಿಯಾದರೂ ಶೋಧಿಸಬೇಕೆಂಬುದು ಸ್ಪಷ್ಟ. ಈ ಪ್ರಪಂಚದ ಬಂಧನದಿಂದ ಪಾರಾಗುವ ದಾರಿಯನ್ನು ನಾವು ಮೆಲ್ಲಮೆಲ್ಲನೆ ನಿಶ್ಚಯಪೂರ್ವಕವಾಗಿ ನಡೆಯಬೇಕು. ' ನೇತಿ ' ಮಾರ್ಗದಿಂದ ಜಗತ್ತಿನ ಬಂಧನಗಳನ್ನೆಲ್ಲ

ಒಮ್ಮೆಲೆ ಹರಿದೊಗೆಯುವ ಪುರುಷರಿರಬಹುದು. ಹಾವು ತನ್ನ ಮೈಯಿಂದ ಪರೆಯನ್ನು ಹಾಯಾಗಿ ಸದ್ದಿಲ್ಲದೆ ತೆಗೆದೊಗೆಯುವಂತೆ, ಕೇವಲ ಇಚ್ಛಾ ಮಾತ್ರದಿಂದ ಜಗತ್ತಿನ ಬಂಧನಗಳನ್ನು ಕಿತ್ತೊಗೆದು ಮುಕ್ತರಾಗುವ ಧೀರ ಪುರುಷರು ತೀರ ವಿರಳರೆಂಬುದು ಸ್ಪಷ್ಟವಿದೆ. ಇದಲ್ಲದೆ ಈ ಮಾರ್ಗವು ದುರ್ಬಲ ಜನರಿಗೆ ಹೇಗೆ ಶಕ್ಯವಾದೀತು? ಕರ್ಮವನ್ನು ಮಾಡು ಮಾಡುತ್ತ ಮುಕ್ತಿಯನ್ನು ದೊರಕಿಸುವ ದಾರಿ ಅವರಿಗೆ ಬೇಕು. ಈ ಕರ್ಮ ರಹಸ್ಯದ ಮಾರ್ಗವು ನಮಗೆ ಕರ್ಮಯೋಗದಿಂದಲೇ ದೊರಕುವುದು ಸಾಧ್ಯ. ಪ್ರತ್ಯೇಕ ಕರ್ಮದಿಂದ ಮುಕ್ತಿಮಂದಿರದ ಮೆಟ್ಟಲುಗಳನ್ನೆಂತು ಏರಬೇಕೆಂಬುದನ್ನು ಕರ್ಮಯೋಗವು ನಮಗೆ ಕಲಿಸುತ್ತದೆ.

ಕರ್ಮಯೋಗವು ಮುಖ್ಯವಾಗಿ 'ಯಾವಾಗಲೂ ಕರ್ಮವನ್ನು ಮಾಡಿರಿ; ಆದರೆ ಅಲಿಪ್ತರಾಗಿ ಮಾಡಿರಿ' ಎಂದು ಹೇಳುತ್ತದೆ. ಕರ್ಮವನ್ನು ಮಾಡುಮಾಡುತ್ತ ನಮ್ಮನ್ನೇ ನಾವು ಮರೆತು ಕರ್ಮದೊಂದಿಗೆ ಏಕ ಜೀವರಾಗುತ್ತೇವೆಂಬುದು ಸೂಕ್ಷ್ಮಬುದ್ಧಿಯಿಂದ ಯೋಚಿಸಿ ನೋಡಿದರೆ ತಿಳಿಯದಿರಲಾರದು. ಇದೇ ನಮ್ಮ ಮೊದಲನೆಯ ದೊಡ್ಡ ತಪ್ಪು. ಕರ್ಮ ಮತ್ತು ನಾವು ಬೇರೆ ಬೇರೆಯೆಂಬ ಭಾವನೆಯನ್ನು ಮೊತ್ತಮೊದಲು ಗಟ್ಟಿ ಮಾಡಿಕೊಳ್ಳಬೇಕು. ಈ ಭಾವನೆಯಿಂದಲೇ ನಾವು ನಮ್ಮ ಮನಸ್ಸನ್ನು ಸ್ವತಂತ್ರವಾಗಿಟ್ಟುಕೊಳ್ಳಬೇಕು. ನಮಗೆ ಈ ಜಗತ್ತಿನಲ್ಲಿ ಅನೇಕ ಪ್ರಕಾರದ ದುಃಖಗಳೂ ಸಂಕಟಗಳೂ ಬಂದೊದಗುತ್ತವೆ. ಆದರೆ ಜಗತ್ತಿನ ಅಸ್ತಿತ್ವವೇ ಅದನ್ನವಲಂಬಿಸಿರುವುದರಿಂದ ಅದರ ವಿಷಯದಲ್ಲಿ ವಿಶೇಷವಾಗಿ ಯೋಚಿಸಿ ತಲೆಯನ್ನು ಕೆಡಿಸಿಕೊಳ್ಳುವುದರಿಂದ ಲಾಭವೇನಿದೆ? ಈ ಪ್ರಪಂಚ ಅನಂತ ಕಾಲದ ವರೆಗೆ ಹೀಗೆಯೇ ಇರುವುದು. ಆದರಂತೆ ಶ್ರೀಮಂತ ಬಡವರೆಂಬ ಸ್ಥಿತಿಯು ಕೂಡ ಬಹು ದಿನ ಬಾಳುವುದಿಲ್ಲ. ನಮ್ಮ ನಿಜವಾದ ಮೂಲ ಅನಂತ ಸ್ವರೂಪಕ್ಕೂ ಈ ಸಿರಿವಂತಿಕೆ, ಬಡತನ ಅಥವಾ ಲೌಕಿಕ ಸುಖ ಇವುಗಳಿಗೂ ಏನೂ ಸಂಬಂಧವಿಲ್ಲ. ನಮ್ಮ ನಿತ್ಯಸ್ವರೂಪವು ಅದಕ್ಕಿಂತ ಬಹಳ ಆಚೆಗೆ ಇರುವುದು. ಅದು ಪ್ರತ್ಯೇಕ ದೃಶ್ಯ ಪದಾರ್ಥದ ಆಚೆಗೂ ಕಲ್ಪನೆಯ ಆಚೆಗೂ ಇರುತ್ತದೆ. "ಯತೋ ವಾಚೋ ನಿವರ್ತಂತೆ ಅಪ್ರಾಪ್ಯಮನಸಾ ಸಹ" ಎಂಬಂತೆ ನಮ್ಮ ನಿತ್ಯರೂಪವಿರುತ್ತದೆ. ಆ ನಮ್ಮ ಮೂಲ ರೂಪಕ್ಕೆ ತಿರುಗಿ ಹೋಗುವ ಮಾರ್ಗವನ್ನು ನಿತ್ಯಕರ್ಮ

ವನ್ನು ಮಾಡುತ್ತಿರುವಾಗಲೇ ನಾವು ಅನುಸರಿಸಬೇಕು. ಇದಕ್ಕೋಸ್ಕರ "ದುಃಖ ಪ್ರಾಪ್ತಿ ಕರ್ಮದಿಂದಲ್ಲ; ಆದರೆ ಫಲಾಸಕ್ತಿಯಿಂದ" ಎಂಬ ಸಿದ್ಧಾಂತವನ್ನು ನಾವು ನಿತ್ಯ ಲಕ್ಷ್ಯದಲ್ಲಿಡಬೇಕು. ಕರ್ಮ ಮತ್ತು ಅದರ ಕರ್ತನು ಏಕಜೀವರಾದರೆ ಅದರಿಂದ ಹುಟ್ಟುವ ದುಃಖಗಳನ್ನು ಅನುಭೋಗಿಸುವುದು ಕರ್ತನ ಹಣೆಯಲ್ಲಿ ಬರೆದಿಟ್ಟ ಮಾತೇ ಸರಿ. ಆದರೆ ಕರ್ಮ ಮತ್ತು ಕರ್ತಾ ಬೇರೆ ಬೇರೆಯಾದರೆ ಕರ್ಮದಿಂದ ಉದ್ಭವಿಸುವ ಸುಖ ದುಃಖಗಳಿಗೂ ಕರ್ತನಿಗೂ ಏನೂ ಸಂಬಂಧವುಳಿಯುವುದಿಲ್ಲ. ಒಬ್ಬ ಮನುಷ್ಯನ ಒಂದು ಸುಂದರ ವಸ್ತುವು ನಾಶವಾದುದನ್ನು ನೋಡಿ, ಇನ್ನೊಬ್ಬನಿಗೇನೂ ದುಃಖವೆನಿಸುವುದಿಲ್ಲ. ಆದರೆ ತನ್ನದೇ ವಸ್ತುವು ನಾಶ ಹೊಂದಿದರೆ, ಅವನು ಎದೆ ಎದೆ ಬಡೆದುಕೊಳ್ಳುತ್ತಾನೆ. ನಿಜವಾಗಿ ನೋಡಿದರೆ, ಎರಡೂ ಸುಂದರ ವಸ್ತುಗಳೇ. ಎರಡೂ ಒಂದೇ ರೀತಿಯಲ್ಲಿ ಸುಂದರವಾಗಿದ್ದವು. ಆದರೆ ಒಂದರ ನಾಶದಿಂದ ದುಃಖವಾಗಲಿಲ್ಲ, ಮತ್ತೊಂದರ ನಾಶದಿಂದ ದುಃಖವಾಯಿತು. ಅದೇಕೆ? ಮೊದಲನೆಯ ವಸ್ತುವಿನಲ್ಲಿ ಅವನ ಮನಸ್ಸು ಸಂಲಗ್ನವಾಗಿದ್ದಿಲ್ಲ, ಸ್ವತಂತ್ರವಾಗಿತ್ತು. ಆದರೆ ಮತ್ತೊಂದು ವಸ್ತುವಿನೊಂದಿಗೆ ಅವನ ಚಿತ್ತವು ಏಕಜೀವವಾಗಿತ್ತು. ಆದ್ದರಿಂದ ಅದರ ನಾಶದಿಂದ ಅವನ ಚಿತ್ತಕ್ಕೆ ಪೆಟ್ಟು ತಗಲಿ ದುಃಖ ಉಂಟಾಯಿತು. ಜಗತ್ತಿನೊಳಗಿನ ಎಲ್ಲ ದುಃಖವು 'ನಾನು' 'ನನ್ನದು' ಎಂಬ ಎರಡು ಮಾತಿನಲ್ಲಿಯೇ ಒಟ್ಟುಗೂಡಿರುವುದು. ಈ ವಸ್ತು ನನ್ನದೆಂಬ ಭಾವನೆ ಬಂದ ಕೂಡಲೇ ಅಲ್ಲಿ ಆಸಕ್ತಿಯುಂಟಾಗುತ್ತದೆ. ದುಃಖವು ಈ ಆಸಕ್ತಿಯ ಹಿಂದೆಯೇ ಇದೆಯೆಂಬುದನ್ನು ತಿಳಿಯಬೇಕು.

'ನಾನು' 'ನನ್ನದು' ಎಂಬ ಭಾವನೆಯಿಂದ ಕರ್ಮವನ್ನು ಮಾಡಿದರೆ ಅಥವಾ ಈ ಭಾವನೆಯಿಂದ ಪ್ರೇರಿತವಾದ ವಿಚಾರವು ಮನಸ್ಸಿನಲ್ಲಿ ಉದ್ಭವಿಸಿದರೆ, ಆ ಕ್ಷಣದಲ್ಲಿಯೇ ನಾವು ಅಭಿಮಾನದ ಅಥವಾ ಭಾವನೆಯ ಆಳಾಗುತ್ತೇವೆ. ದೊರೆಯಾಗಿದ್ದವನು ಆ ಕ್ಷಣದಲ್ಲಿಯೇ ಗುಲಾಮನಾಗುವನು. ನಾನು ನನ್ನದು ಎಂಬ ವಿಚಾರದಿಂದ ನಮ್ಮ ಚಿತ್ತವು, ಆ ಕ್ಷಣದಲ್ಲಿಯೇ, ನಮ್ಮ ಸುತ್ತಲು ಬಿಗಿಯುತ್ತಿರುವ ಸರಪಳಿಗೆ ಒಂದು ಹೊಸ ಬಳೆಯನ್ನು ಜೋಡಿಸುತ್ತದೆ. ನಾನು ನನ್ನದು ಎಂಬ ವಿಚಾರವು ಬೆಳೆಯುತ್ತ ಹೋದಂತೆ ನಮ್ಮನ್ನು ಬಿಗಿದ ಸರಪಳಿ ಹೆಚ್ಚು ಜಡವೂ ಹೆಚ್ಚು ಕಷ್ಟ

ಪ್ರದವೂ ಆಗುತ್ತದೆ. ಆದ್ದರಿಂದ ಜಗತ್ತಿನ ಸ್ವರೂಪವನ್ನು ನೋಡಿ ಆನಂದ ಪಡೆಯಿರಿ, ಅದರಿಂದ ಕಲಿಯಬೇಕಾಗಿದ್ದ ಬೋಧಗಳನ್ನೆಲ್ಲ ಗ್ರಹಿಸಿರಿ, ಆದರೆ ಅದರ ಸೆಳವಿಗೆ ಮಾತ್ರ ಸಿಗಬೇಡಿರಿ ಎಂದು ಕರ್ಮಯೋಗವು ಬೋಧಿಸುತ್ತದೆ. 'ನನ್ನ'ದೆಂಬ ಮಾತನ್ನು ಎಂದಿಗೂ ಆಡಬೇಡಿರಿ. ದುಃಖದ ಬೀಜವನ್ನು ಬಿತ್ತಲು 'ನನ್ನದು' ಎಂಬ ಬರಿಯ ಶಬ್ದವೂ ಸಾಕು. ಮಕ್ಕಳ ಲೀಲೆಯನ್ನು ನೋಡಿ ಆನಂದಪಡಲು ಅಡ್ಡಿಯಿಲ್ಲ. ಆದರೆ 'ನನ್ನ' ಮಗುವೆಂದು ಹೇಳಬೇಡಿರಿ. ನನ್ನ ಮನೆ, ನನ್ನ ಶರೀರ ಎಂದು ಹೇಳಬೇಡಿರಿ. 'ನನ್ನ'ದೆಂಬುದೇ ಸರ್ವ ಸಂಕಟಕ್ಕೂ ದುಃಖಗಳಿಗೂ ಕಾರಣ. ನಿಜವಾಗಿ ಶರೀರವು ನಿನ್ನದೂ ಅಲ್ಲ, ನನ್ನದೂ ಅಲ್ಲ, ಯಾರದೂ ಅಲ್ಲ. ಸೃಷ್ಟಿನಿಯಮಕ್ಕನುಸರಿಸಿ ಸಾವಿರಾರು ದೇಹಗಳು ಬರುತ್ತವೆ, ಹೋಗುತ್ತವೆ. ಅವುಗಳ ಬರುಹೋಗುವಿಕೆಗೆ ನಾವು ಬರಿಯ ಸಾಕ್ಷಿ ಮಾತ್ರ. ಶರೀರದ ನಿಜವಾದ ಯೋಗ್ಯತೆಯು ಈ ಗೋಡೆ ಅಥವಾ ಅದರ ಮೇಲಿನ ಚಿತ್ರಕ್ಕಿಂತ ಹೆಚ್ಚಿನದೇನೂ ಅಲ್ಲ. ಈ ಮಣ್ಣಿನ ಗೊಂಬೆಗೆ ನಾವೇಕೆ ಇಷ್ಟು ಮೋಹಗೊಳ್ಳಬೇಕು? ಒಬ್ಬ ಚಿತ್ರಕಾರನು ಒಂದು ಚಿತ್ರವನ್ನು ತೆಗೆದು ಸುಮ್ಮನೆ ಮುಂದೆ ಸಾಗಿಬಿಟ್ಟರೆ, ಆ ಚಿತ್ರದ ನೆನಪೇ ಉಳಿಯುವುದಿಲ್ಲ. ಅದೇ ನನ್ನ ಚಿತ್ರವೆಂದು ಹೇಳಿಕೊಂಡರೆ, ಬಂಧನವೂ ದುಃಖವೂ ಉಂಟಾಗದಿರದು.

ಆದುದರಿಂದಲೇ, 'ನಾನು, ನನ್ನದು' ಎಂಬ ಸ್ವಾರ್ಥಭಾವನೆಯನ್ನು ಮೊದಲು ತ್ಯಾಗಮಾಡಿರೆಂದು ಕರ್ಮಯೋಗವು ಹೇಳುತ್ತದೆ. ಈ ಸ್ವಾರ್ಥ ಬುದ್ಧಿಯನ್ನು ಸಂಗ್ರಹಿಸುವ ಶಕ್ತಿ ಕೈವಶವಾದ ಕೂಡಲೆ ಅದನ್ನು ಬಲವಾಗಿ ಬಿಗಿಹಿಡಿದು ಕುಳ್ಳಿರಿಸಿ ಮನಸ್ಸು ಅದರ ಸೆಳವಿನಲ್ಲಿ ಸಿಲುಕಿಕೊಳ್ಳದಂತೆ ಎಚ್ಚರದಿಂದಿರಬೇಕು. ಹೀಗೆ ಅದನ್ನು ಹಿಡಿತದಲ್ಲಿಟ್ಟುಕೊಂಡು ಪ್ರಪಂಚದಲ್ಲಿ ಬೇಕಾದ ಹಾಗೆ ದುಮುಕಬೇಕು. ಬೇಕುಬೇಕಾದ ಕರ್ಮಗಳನ್ನು ಮಾಡಬಹುದು; ಬೇಕುಬೇಕಾದಲ್ಲಿ ಹೋಗಬಹುದು; ಬೇಕುಬೇಕಾದವರೊಡನೆ ಕೂಡಿಕೊಳ್ಳಬಹುದು. ಯಾವ ಪಾಪವೂ ನಿಮ್ಮನ್ನು ಸ್ಪರ್ಶ ಮಾಡಲಾರದು. ಕಮಲದೆಲೆ ನೀರಲ್ಲಿಯೇ ಹುಟ್ಟಿ ಅಲ್ಲಿಯೇ ವಾಸ ಮಾಡಿಕೊಂಡಿದ್ದರೂ ನೀರು ಅದಕ್ಕೆ ಅಂಟಿಕೊಳ್ಳಲಾರದು. ಅದರಂತೆ ನಿಮ್ಮ ಮನಸ್ಸು ನಿಮ್ಮ ಅಂಕಿತದಲ್ಲಿರುವ ವರೆಗೆ ನೀವು ಅದರ ನಿಗ್ರಹಕರ್ತ ಸ್ವಾಮಿ

ಯಾಗಿರುವ ವರೆಗೆ ಪಾಪ ದುಃಖಗಳು ನಿಮ್ಮನ್ನು ಮುಟ್ಟಲು ಕೂಡ ಆರವು. ಇದಕ್ಕೇ ವೈರಾಗ್ಯವೆಂದು ಹೆಸರು. ಇದೇ ಉದಾಸೀನ ವೃತ್ತಿ. ಈ ವೃತ್ತಿ ಪೂರ್ಣವಾಗಿ ಕೈಗೂಡದೆ, ಕರ್ಮಯೋಗವೊಂದೇ ಏಕೆ-ಯಾವ ಯೋಗವೂ ಕೈಗೂಡಲಾರದು. ಅನಾಸಕ್ತಿಯು ಎಲ್ಲ ಯೋಗ ಗಳಿಗೂ ತಳಹದಿ. ಆದರೆ ಉದಾಸೀನ ವೃತ್ತಿಯೆಂದರೆ ಏನೆಂಬ ಕಲ್ಪನೆ ಮೊದಲು ಸ್ಪಷ್ಟವಾಗಬೇಕು. ಮನೆ ಮಾರುಗಳನ್ನು ತೊರೆದು ಅಡವಿ ಯನ್ನು ಸೇರಿ ಲಂಗೋಟಿಯನ್ನು ಮಾತ್ರ ಹಾಕಿಕೊಂಡು ಕಂದ ಮೂಲ ಗಳನ್ನೂ ಗಡ್ಡೆ ಗೆಣಸುಗಳನ್ನೂ ತಿಂದು ಬದುಕಿದರೂ ಅವನು ನಿಜವಾದ ಉದಾಸೀನ ವೃತ್ತಿಯುವನೆಂದು ಹೇಳಲು ಬರಲಾರದು. ಅವನ ಶರೀರವೇ ಅವನಿಗೆ ಬಂಧನವಾಗಿ ಪರಿಣಮಿಸಬಹುದು. ಅವನು ಅದರಲ್ಲಿಯೇ ಆಸಕ್ತನಾಗಿರಬಹುದು, ಅದರ ಸಲುವಾಗಿಯೇ ಹೋರಾಡುತ್ತಿರಬಹುದು. ಆದರಿಂದ ಅವನ ಕಾರ್ಯಕ್ಷೇತ್ರವು ಸಂಕುಚಿತವಾಗಿರಬಹುದು. ಉದಾ ಸೀನತೆ ಎಂಬ ಶಬ್ದವು ಸೂಚಿಸುವುದು ಶಾರೀರಕ ಸುಖ ದುಃಖಗಳನ್ನಲ್ಲ. ಅದು ಕೇವಲ ಮಾನಸಿಕ ಸ್ಥಿತಿ. ನಾನು ನನ್ನದೆಂಬ ಬಂಧನದ ವಾಸವು ಹೊರಗಿನ ದೇಹದಲ್ಲಿರದೆ ಅಂತರಂಗದಲ್ಲಿದೆ. ಹೊರಗಣ ವಸ್ತುಗಳನ್ನು ಮನಸ್ಸಿಗೆ ಅಂಟಿಸಿಕೊಡುವ ಕಾರ್ಯವನ್ನು ಮಾತ್ರ ಇಂದ್ರಿಯ ದ್ವಾರ ದಿಂದ ದೇಹವು ಮಾಡುತ್ತಿದೆ, ಅಷ್ಟೇ. ಆದರೆ ಅದರಿಂದ ಪ್ರಾಪ್ತವಾಗುವ ಬಂಧನದ ಬೇಡಿ ಒಳಗೇ ಸಿದ್ಧವಾಗುತ್ತದೆ. ಆದ್ದರಿಂದ ನಾನು ನನ್ನ ದೆಂಬ ಬಂಧನದ ಭಾವನೆ ಇಲ್ಲದಂತಾಗಿ ಹೊರಗಣ ಪದಾರ್ಥಕ್ಕೂ ನಮಗೂ ಇರುವ ಸಂಬಂಧವು ಹರಿದು ಹೋದಾಗಲೇ ನಾವು ಉದಾಸೀನರಾಗು ತ್ತೇವೆ. ಒಬ್ಬ ಮನುಷ್ಯನು ರಾಜನಾಗಿದ್ದು ಸರ್ವಭೋಗಗಳನ್ನು ಭೋಗಿಸುತ್ತಿದ್ದರೂ ಉದಾಸೀನನಾಗಿರಬಹುದು. ಮತ್ತೊಬ್ಬನು ಲಂಗೋಟಿ ಯನ್ನು ಹಾಕಿಕೊಂಡ ಬೈರಾಗಿಯಾಗಿದ್ದರೂ ಅತ್ಯಂತ ಆಸಕ್ತನಾಗಿರ ಬಹುದು. ಆದ್ದರಿಂದ ಮೊದಲು ಉದಾಸೀನ ವೃತ್ತಿಯನ್ನು ಸಂಪಾದಿಸಿ, ಆ ಮೇಲೆ ಯಾವಾಗಲೂ ಕಾರ್ಯತತ್ಪರರಾಗಿರಬೇಕು. ಈ ಉದಾಸೀನ ವೃತ್ತಿಯನ್ನು ಮೈಗೂಡಿಸಿಕೊಳ್ಳಲು ಕರ್ಮಯೋಗವು ಬಹಳ ಸಹಾಯ ಕಾರಿಯಾಗಿದೆ. ಆದರೂ ಈ ಸ್ಥಿತಿಯ ಸಂಪಾದನೆ ಬಲು ಕಠಿಣವಾದದ್ದು.

ಕರ್ಮಯೋಗದಲ್ಲಿ ಮುಖ್ಯವಾಗಿ ಎರಡು ಮಾರ್ಗಗಳಿವೆ. ಒಂದು

ಮಾರ್ಗವು ನಿರೀಶ್ವರವಾದಿಗಳಾದ ಜನರ ಸಲುವಾಗಿದೆ. ಪರಮೇಶ್ವರನ ಅಸ್ತಿತ್ವದಲ್ಲಿ ನಂಬಿಗೆಯಿಲ್ಲದಂಥ ಅಥವಾ ಆ ವಿಷಯದಲ್ಲಿ ಸಾಶಂಕವೃತ್ತಿಯುಳ್ಳಂಥ ಮತ್ತು ತಮ್ಮ ಕಾರ್ಯದಲ್ಲಿ ತಮಗೆ ಪರಮೇಶ್ವರನ ಸಹಾಯವು ದೊರಕುವುದೆಂಬ ಭಾವನೆಯು ಚಿತ್ತದಲ್ಲಿ ಹುಟ್ಟದಂಥ ಜನರ ಸಲುವಾಗಿ ಕರ್ಮಯೋಗವು ಒಂದು ದಾರಿಯನ್ನು ತೋರಿಸಿಕೊಟ್ಟಿರುತ್ತದೆ. ಅವರು ಸ್ವಬುದ್ಧಿಯಿಂದಲೇ ಸದೈವ ಕಾರ್ಯಮಗ್ನರಾಗಿರಬೇಕು. ತಮ್ಮಷ್ಟಕ್ಕೆ ತಮಗೇ ತೋರಿದ ಅಥವಾ ಯೋಗ್ಯವೆಂದು ಕಂಡ ಮಾರ್ಗವನ್ನು ಸ್ವೀಕರಿಸಿ ಕಾರ್ಯನಿರತರಾಗಿರಬೇಕು. ಅವರ ಸ್ವಂತ ಸದಸದ್ವಿವೇಕ ಬುದ್ಧಿಯೇ ಅವರಿಗೆ ಮೂಲಾಧಾರ. ಈ ರೀತಿಯಿಂದ ಕಾರ್ಯಮಗ್ನರಾಗಿದ್ದರೂ ಮನಸ್ಸಿನಿಂದ ಮಾತ್ರ ಕಾರ್ಯದಲ್ಲಿ ಅಂಟಿಕೊಂಡಿರಬಾರದು. ಮನಸ್ಸು ಯಾವಾಗಲೂ ಸ್ವತಂತ್ರವಾಗಿರಬೇಕು. 'ನಾನು ಇದರಲ್ಲಿ ಸುಖ ದುಃಖಗಳನ್ನು ಅಪೇಕ್ಷಿಸಬಾರದು' ಎಂದು ಅವನು ಸದಾ ಚಿಂತಿಸುತ್ತಿರಬೇಕು. ಕಾರ್ಯವನ್ನು ಮಾಡುತ್ತಿರುವಾಗ ಎಂಥ ಫಲವು ದೊರಕುವುದೆಂಬುದನ್ನು ಆಲೋಚಿಸದೆ, ಒಳಿತಿನಿಂದ ಸುಖವನ್ನೂ ಕೆಡುಕಿನಿಂದ ದುಃಖವನ್ನೂ ತಂದುಕೊಳ್ಳಬಾರದು. ಪರಮೇಶ್ವರನ ಅಸ್ತಿತ್ವದಲ್ಲಿ ಪೂರ್ಣ ವಿಶ್ವಾಸವಿದ್ದವರ ಸಲುವಾಗಿ ಕರ್ಮಯೋಗವು ಎರಡನೆಯ ಮಾರ್ಗವನ್ನು ಹೇಳುತ್ತದೆ. ಈ ಮಾರ್ಗವು ಬಹಳ ಸುಲಭವಾದುದು. ಇಂಥ ಮನುಷ್ಯರು ಯಾವಾಗಲೂ ಉದ್ಯೋಗರತರಾಗಿ ಕೃಷ್ಣಾರ್ಪಣ ಬುದ್ಧಿಯಿಂದ ಎಲ್ಲ ಕಾರ್ಯಗಳನ್ನೂ ಮಾಡುತ್ತಿರಬೇಕು. ಕಾರ್ಯದಿಂದ ಒದಗಿದ ಫಲವು 'ನನ್ನದಲ್ಲ, ಪರಮೇಶ್ವರನದು' ಎಂದು ಅವರು ಯಾವಾಗಲೂ ಚಿಂತನೆ ಮಾಡುತ್ತಿರಬೇಕು. ಮಾಡುವುದನ್ನೆಲ್ಲ ಪರಮೇಶ್ವರನ ಪ್ರೀತಿಗಾಗಿಯೇ ಮಾಡಬೇಕು. ಸ್ವಂತ ಸುಖಕ್ಕಾಗಿ ಏನನ್ನೂ ಮಾಡಕೂಡದೆಂದು ಮನಸ್ಸಿನ ಪೂರ್ಣ ನಿರ್ಧಾರವಿರಬೇಕು. ನೋಡುವುದು, ಕೇಳುವುದು ಅಥವಾ ದಶೇಂದ್ರಿಯಗಳಿಂದ ಮಾಡುವ ಕೆಲಸಗಳೆಲ್ಲ ಪರಮೇಶ್ವರನ ಸಲುವಾಗಿಯೇ. ತನ್ನ ಕೈಯಿಂದ ಏನಾದರೊಂದು ಒಳ್ಳೇ ಕೆಲಸವಾಗಿದ್ದರೆ ಅದರ ಸ್ತುತಿಪರ ಶಬ್ದಗಳನ್ನು ಕಿವಿಯಿಂದ ಕೇಳಬಾರದು. ಏಕೆಂದರೆ ಆ ಕಾರ್ಯವು ಪರಮೇಶ್ವರನದಾದ್ದರಿಂದ ಅದರ ಸ್ತುತಿಯೂ ಅವನಿಗೇ ಸಲ್ಲತಕ್ಕದ್ದು. ನಾವು ಕೇವಲ ಪರಮೇಶ್ವರನ ದಾಸರು, ಅಡಿಯಾಳು.

ಪರಮೇಶ್ವರನು ನಮ್ಮ ಕೈಯಿಂದ ತನ್ನ ಕೆಲಸಗಳನ್ನು ಮಾಡಿಸಿ ಕೊಳ್ಳುತ್ತಾನೆ. ಇಂಥ ಒಂದು ಕೆಲಸವನ್ನು ಮಾಡಬೇಕೆಂದು ನಮ್ಮ ಮನಸ್ಸಿನಲ್ಲಿ ಬರುವ ವಿಚಾರವು ಅವನ ಆಜ್ಞೆಯೇ ಎಂದು ನಾವು ದೃಢವಾಗಿ ಭಾವಿಸಬೇಕು. 'ನೀನು ಮಾಡುವ ಕಾರ್ಯವನ್ನೂ ಉಣ್ಣುವುದನ್ನೂ ಯಾಗ ಮಾಡುವುದನ್ನೂ ದಾನ ಮಾಡುವುದನ್ನೂ ಗೈದ ತಪಸ್ಸನ್ನೂ ನನಗೆ ಅರ್ಪಣ ಮಾಡು' ಎಂದು ಗೀತೆಯಲ್ಲಿ ಶ್ರೀಕೃಷ್ಣನು ಕರ್ಮ ಯೋಗದ ಎರಡನೇ ಮಾರ್ಗವನ್ನು ಹೇಳಿರುವನು. ಮಾಡುವವನೂ ಮಾಡಿಸುವವನೂ, ಪರಮೇಶ್ವರನೇ. ಎಂದ ಮೇಲೆ ನಾವು ಸುಖದುಃಖ ಗಳನ್ನು ಸುಮ್ಮನೆ ಮನಸ್ಸಿಗೆ ಹಚ್ಚಿಕೊಂಡು ವ್ಯರ್ಥವಾಗಿ ಏಕೆ ವ್ಯಥೆಪಡ ಬೇಕು, ಎಂಬ ವಿಚಾರವನ್ನು ಭಕ್ತನು ಗಟ್ಟಿಮಾಡಿಕೊಂಡು ಯಾವಾಗಲೂ ಸಂತುಷ್ಟವೃತ್ತಿಯಿಂದ ಇರಬೇಕು. ಅವನು ತನ್ನ ಶರೀರ ಮನಸ್ಸು ಗಳೆರಡನ್ನೂ ಭಗವಂತನಿಗೆ ಅರ್ಪಣ ಮಾಡಬೇಕು. ದೊಡ್ಡ ದೊಡ್ಡ ಅಗ್ನಿ ಗಳನ್ನು ಪ್ರದೀಪ್ತಮಾಡಿ ಅವುಗಳಲ್ಲಿ ಆಹುತಿ ಹಾಕುವುದರ ಬದಲು ಈ ಮಹಾಯಜ್ಞವನ್ನು ಮಾಡಿರಿ. ಇದು ಪೂರ್ಣತೆಯನ್ನು ಹೊಂದಿದರೆ ನೀವು ಜ್ಞಾನಜಲದಿಂದ ಅವಭೃತಸ್ನಾನವನ್ನು ಮಾಡಿದಂತಾಗಿ ತಪ್ಪದೆ ಮುಕ್ತರಾಗುವಿರಿ. 'ಈ ಪ್ರಪಂಚದಲ್ಲಿ ಕಂಡುಬರುವ ಎಲ್ಲವಸ್ತುಗಳೂ— ಒಳಿತಿರಲಿ, ಕೆಡುಕಿರಲಿ, ಉಪೇಕ್ಷ್ಯವಾಗಿರಲಿ,— ಹೇಗಿದ್ದರೂ ಅವೆಲ್ಲ ಪರಮೇಶ್ವರನವೇ. ನನಗೆ ಅದರಲ್ಲಿ ಏನೂ ಬೇಕಿಲ್ಲ' ಎಂದು ನಾವು ಯಾವಾಗಲೂ ನಮ್ಮ ಮನಸ್ಸಿಗೆ ಹೇಳುತ್ತಿರಬೇಕು. ಈ ಚಟವು ಯಾವಾಗಲೂ ಮನಸ್ಸಿಗೆ ಅಂಟಿಕೊಂಡಿದ್ದರೆ ಅದೇ ಮೆಲ್ಲಮೆಲ್ಲನೆ ಸ್ವಭಾವ ರೂಪವನ್ನು ಹೊಂದಿ ಕಾಲುಬೆರಳಿನಿಂದ ಮೊದಲುಗೊಂಡು ನಡುನೆತ್ತಿಯ ವರೆಗೆ ಇಡೀ ದೇಹವನ್ನೇ ವ್ಯಾಪಿಸುವುದು. ಪ್ರತಿ ರೋಮರಂಧ್ರದಲ್ಲಿಯೂ, ನಾಡಿಯಲ್ಲಿಯೂ, ಸಂದುಗೂಡಿಕೊಳ್ಳುವುದು. ಇಂಥ ಸ್ಥಿತಿಯು ಪ್ರಾಪ್ತ ವಾದ ಮೇಲೆ, ಕೈಗೆ ಕೈ ಹತ್ತುವ ಯುದ್ಧಸಂದರ್ಭಗಳಲ್ಲಿ ಕೂಡ ಪ್ರವೇಶ ಮಾಡಿ ನಮ್ಮ ಪ್ರಚಂಡ ಆರ್ಭಟದಿಂದ ಮೇಘರಾಜನನ್ನೂ ನಾಚಿಸುವಂಥ ತೋಫಿನ ಎದುರಿಗೆ ನಾವು ಧೈರ್ಯದಿಂದ ನಡೆದುಕೊಂಡು ಹೋದರೂ ನಮ್ಮ ಮನಶ್ಶಾಂತಿ ನಮ್ಮನ್ನು ಬಿಟ್ಟು ಅಗಲದು.

ಸಾಮಾನ್ಯ ವ್ಯವಹಾರದಲ್ಲಿ ನಾವು ಕರ್ತವ್ಯಕರ್ಮವೆಂದು ಹೇಳುವುದು

ಕರ್ಮಯೋಗದ ದೃಷ್ಟಿಯಿಂದ ತೀರ ಕೀಳು ತರದ್ದು. ಇಂಥ ಕರ್ತವ್ಯಗಳು ದಿನವೂ ನಮ್ಮೆಲ್ಲರ ಬೆನ್ನು ಹತ್ತಿಕೊಂಡಿರುವವು. ಕರ್ತವ್ಯ ಕರ್ತವ್ಯ ವೆಂದು ಹೇಳುತ್ತ ನಾವು ದಿನವೂ ಕೆಲಸ ಮಾಡುತ್ತಿರುವಾಗಲೇ ದುಃಖವು ಹುಟ್ಟುವುದೆಂಬುದು ದಿನವೂ ನಮ್ಮ ಅನುಭವಕ್ಕೆ ಬರುವ ಮಾತು. ಇಂಥ ಪ್ರಸಂಗದಲ್ಲಿ ಆ ಕರ್ಮವು ಕರ್ತವ್ಯರೂಪವನ್ನು ಹೊಂದಿರದೆ, ದುಃಖವನ್ನು ತಂದುಕೊಡುವಂಥ ಒಂದು ರೋಗವೇ ಆಗಿರುತ್ತದೆಂದು ಹೇಳಬೇಕಾಗು ವುದು. ಮನಸ್ಸಿನಲ್ಲಿ ತೋರಿದುದೆಲ್ಲ ಕರ್ತವ್ಯವೆಂದೇ ನಮ್ಮ ತಿಳಿವಳಿಕೆ. ಈ ಕರ್ತವ್ಯಭ್ರಮೆಯೆಂಬ ತಿರುಗಣೆಯ ಮಡುವಿನಲ್ಲಿ ಒಮ್ಮೆ ನಾವು ಸಿಲುಕಿಕೊಂಡರೆ ಇಡೀ ಆಯುಷ್ಯವು ಮುಗಿಯುವ ವರೆಗೂ ಅದರೊಳಗಿಂದ ಬಿಡುಗಡೆ ಹೊಂದಲಾರೆವು. ಈ ಕರ್ತವ್ಯಭ್ರಮೆ ನಮ್ಮ ಇಡೀ ಆಯುಷ್ಯ ವನ್ನೇ ಹದಗೆಡಿಸುವುದು. ಕಡುಬೇಸಿಗೆಯಲ್ಲಿ ನಡುನೆತ್ತಿಯ ಮೇಲಿನ ಸೂರ್ಯನು ಪದಾರ್ಥಗಳನ್ನು ಸುಟ್ಟು ಹುರಿಪಳಿಸುವಂತೆ ಈ ಕರ್ತವ್ಯ ಭ್ರಮೆ ನಮ್ಮ ಆಯುಷ್ಯವನ್ನೆಲ್ಲ ಸುಡುತ್ತದೆ. ಸಂಸಾರ ಚಕ್ರದಲ್ಲಿ ಪೂರ್ಣ ವಾಗಿ ಸಿಲುಕಿಕೊಂಡು ಕರ್ತವ್ಯಭ್ರಮೆಯಿಂದ ದಾಸಾನುದಾಸನ ಸ್ಥಿತಿ ಯನ್ನು ಹೊಂದಿದಂಥ ಈ ಪಾಮರನನ್ನು ನೋಡಿರಿ;–ಮುಂಜಾವಿನಿಂದ ಸಂಜೆಯ ವರೆಗೆ ಕರ್ತವ್ಯವು ಅವನ ಬೆನ್ನಿಗೆ ಹೊಂದಿಕೊಂಡೇ ಇರುವುದು. ಸ್ನಾನ ಮಾಡಲಿಕ್ಕೂ, ಅಥವಾ ಪರಮೇಶ್ವರನ ನಾಮವನ್ನು ಕೂಡ ಉಚ್ಚರಿಸಲಿಕ್ಕೂ ವೇಳೆ ದೊರಕುವುದಿಲ್ಲ. ಕರ್ತವ್ಯವನ್ನು ಮಾಡಿ ಮಾಡಿ ಹಣ್ಣಾದ ಶರೀರವು ಮಣ್ಣುಗೂಡುವ ವರೆಗೆ ಕರ್ತವ್ಯದ ಬೇನೆ ಒಂದೇ ಸಮನೆ ಬೆನ್ನುಹತ್ತಿರುತ್ತದೆ. ಜನರು ಕೆಲಸವನ್ನು ಮುಗಿಸಿಕೊಂಡು ಮನೆಗೆ ಬಂದರೂ ತಲೆಯಲ್ಲಿ ಅದೇ ವಿಚಾರವು ತಿರುಗುತ್ತಿರುತ್ತದೆ. ಸ್ವಪ್ನದಲ್ಲಿ ಕೂಡ ಅದೇ ಪಿಶಾಚರೂಪೀ ಕರ್ತವ್ಯವು ಮುಂದೆಬಂದು ನಿಲ್ಲುತ್ತದೆ. ಈ ಬಡ ಪ್ರಾಣಿಗೆ ನಿದ್ದೆಯು ಕೂಡ ಚನ್ನಾಗಿ ಹತ್ತುವುದಿಲ್ಲ. ಅಯ್ಯೋ, ಕರ್ತವ್ಯ ಕರ್ತವ್ಯವೆಂದು ಭ್ರಮೆಯಿಂದ ಕೂಗುತ್ತಿರುವ ಈ ಬಡ ಪ್ರಾಣಿ ಈ ಭ್ರಮೆಯಲ್ಲಿಯೇ ಒಂದು ದಿನ ಮರಣ ಹೊಂದುವನು. ಕರ್ತವ್ಯದ ಈ ಅಮಲು ಸಾಮಾನ್ಯ ವ್ಯವಹಾರದಲ್ಲಿ ಎಲ್ಲೆಡೆಯೂ ವ್ಯಾಪಿಸಿಕೊಂಡದ್ದು ಕಂಡುಬರುತ್ತದೆ. ಆದರೆ ನಿಜವಾಗಿ ಇದು ನಮ್ಮ ಕರ್ತವ್ಯವಲ್ಲ. ಹೆಂಡತಿ ಮಕ್ಕಳಿಗೆ, ಆಪ್ತೇಷ್ಟರಿಗೆ ಅಥವಾ ನಮಗೆ ಸುಖವಾಗಬೇಕೆಂದು ಬಯಸಿ

ಮಾಡುವ ಕರ್ಮಗಳೆಲ್ಲವೂ ಕರ್ತವ್ಯಗಳಲ್ಲ. ಸ್ವಂತ ಸುಖದ ಕಲ್ಪನೆಗೆ ಬಲಿಬೀಳದೆ ಅನಾಸಕ್ತಚಿತ್ತದಿಂದ ಪ್ರಾಪ್ತ ಕರ್ಮಗಳನ್ನು ಕೇವಲ ಈಶ್ವರ ಆಜ್ಞೆಯೆಂದು ಪೂರ್ಣಗೊಳಿಸಿ ಫಲವನ್ನು ಅವನಿಗೆ ಅರ್ಪಿಸುವುದು ನಮ್ಮ ನಿಜವಾದ ಕರ್ತವ್ಯ. ಎಲ್ಲ ಕರ್ಮಗಳನ್ನು ಅವನ ಆಜ್ಞೆಯೆಂದೇ ಮಾಡ ಬೇಕು. ನಮಗೆ ಅವನ ಆಜ್ಞೆಯಿಂದಲೇ ಈ ಪ್ರಪಂಚದಲ್ಲಿ ಈ ಮನುಷ್ಯ ಜನ್ಮವು ದೊರೆತಿರುವುದು. ಇದು ಅವನ ಉಪಕಾರವೇ ಸರಿ. ಅವನ ಅಪ್ಪಣೆಯಿಂದ ಪ್ರಾಪ್ತವಾದ ಕರ್ತವ್ಯಗಳನ್ನು ಕೈಗೆ ಬಂದಂತೆ ಮಾಡುತ್ತ ಹೋಗಬೇಕು. ಅವು ಒಳಿತಾಗಿರಲಿ ಕೆಡುಕಾಗಿರಲಿ, ಅದರ ಗೊಡವೆ ನಮಗೆ ಬೇಡ. ಅದನ್ನು ಈಶ್ವರನೇ ನೋಡಿಕೊಳ್ಳುವನು. ಅವು ಒಳಿತಾ ಗಿದ್ದರೆ ಅವುಗಳ ಒಳ್ಳೇ ಫಲಗಳೂ ನಮಗೆ ಬೇಡ. ಅವುಗಳನ್ನೆಲ್ಲ ಈಶ್ವರನೇ ಸ್ವೀಕರಿಸುವನು. ನಾವು ನಮ್ಮ ಚಿತ್ತವನ್ನು ಯಾವಾಗಲೂ ಶಾಂತವಾಗಿ ಇಟ್ಟುಕೊಳ್ಳಬೇಕು. ಸುಖದ ಕಲ್ಪನೆಗೆ ಕಟ್ಟಾಳಾಗಿ ಎಂದಿಗೂ ವ್ಯಥೆ ಪಡಬಾರದು. ಈ ತರದ ಮನಸ್ಸಿನ ಸ್ವಾತಂತ್ರ್ಯವನ್ನು ಗಳಿಸುವುದು ಬಹಳ ಕಠಿಣವಾದ ಕೆಲಸ. ಈ ದರಿದ್ರ ದೇಹದ ತುಚ್ಛವಾಸನೆಗಳನ್ನು ತೃಪ್ತಪಡಿಸುವದಕ್ಕಾಗಿ ನೀಚಕರ್ಮಗಳನ್ನು ಮಾಡುತ್ತ ಅವುಗಳಿಗೆ ಕರ್ತವ್ಯವೆಂಬ ದೊಡ್ಡ ಹೆಸರನ್ನು ಕೊಡುವುದು ಮಾತ್ರ ಈ ಕಾಲದಲ್ಲಿ ಬಲು ಹಗುರು ಕೆಲಸವಾಗಿದೆ. ಕಂಡವರ ಕುತ್ತಿಗೆ ಮುರಿಯುವುದು, ಬೇಕಾದ ಹಾಗೆ ಕೊಲೆ ಪಾತಕಗಳನ್ನು ಮಾಡುವುದು, ಬೇಕುಬೇಕಾದ ಕೆಲಸಗಳನ್ನು ಮಾಡುವುದು, ಹೀಗೇಕೆ ಮಾಡಿದೆಯೆಂದು ಕೇಳಿದರೆ ' ಏನು ಮಾಡುವುದು, ಇದು ನನ್ನ ಕರ್ತವ್ಯವೆಂದೇ ಮಾಡಿದೆನು ' ಎಂದು ಹೆಮ್ಮೆ ಯಿಂದ ಹೇಳಿಕೊಳ್ಳುವುದು. ತಾವು ಮಾಡುವ ಎಂಥ ನೀಚ ಕೃತಿಗಳಿಗೂ ದೇಶಹಿತ, ಮಿತ್ರಹಿತ, ಅಥವಾ ಕುಟುಂಬಹಿತವೆಂದು ಏನಾದರೊಂದು ರೂಪವನ್ನು ಕೊಟ್ಟು ಆ ಹೆಸರಿನಿಂದ ಅವನ್ನು ಮುಚ್ಚಿಕೊಳ್ಳಲಿಕ್ಕೆ ಯತ್ನಿಸುತ್ತಾರೆ. ಕರ್ತವ್ಯವೆಂಬ ಈ ಶಬ್ದದ ಅರ್ಥವೇ ಈಗ ಎಲ್ಲರಿಗೂ ಬೇಕಾಗಿರುವಂತೆ ಕಾಣುತ್ತದೆ.

ಕರ್ತವ್ಯವೆಂಬ ಶಬ್ದದ ಅರ್ಥವನ್ನೇ ನಾವು ಚನ್ನಾಗಿ ತಿಳಿದುಕೊಂಡಿಲ್ಲ. ಏನಾದರೊಂದು ಕಾರ್ಯವನ್ನು ಮಾಡಬೇಕೆಂಬ ಯೋಚನೆ ಮನಸ್ಸಿನಲ್ಲಿ ಹುಟ್ಟಿದಾಗ ಯಾವುದೊಂದು ಶಾರೀರಿಕ ಸುಖದ ಕಲ್ಪನೆಯೇ ಅದಕ್ಕೆ

ಕಾರಣವಾಗಿರುತ್ತದೆ. ಇಂಥ ವಿಚಾರಕ್ಕೆ ಯಾವಾಗಲೂ ಆಸೆಯೇ ಮೂಲ ಕಾರಣ. ಅನಂತಕಾಲದ ಅಭ್ಯಾಸಬಲದಿಂದ ಈ ಇಂದ್ರಿಯಜನ್ಯ ಸುಖವೇ ನಮ್ಮ ಸರ್ವಸ್ವವಾಗಿ ಬಿಟ್ಟಿದೆ. ಮತ್ತು ಅದರ ಪ್ರಾಪ್ತಿಗಾಗಿ ಮಾಡುವ ಕೆಲಸಗಳೆಲ್ಲವೂ ಕರ್ತವ್ಯಗಳೆಂದೇ ನಮಗೆ ತೋರುತ್ತದೆ. ಉದಾಹರಣೆಗೆ: ಕೆಲವು ಸಾಂಸಾರಿಕ ಕರ್ಮಗಳನ್ನು ನಾವು ಪತಿಪತ್ನಿಯರ ಸಂಬಂಧದ ಕರ್ತವ್ಯಗಳೆಂದು ಹೇಳುತ್ತೇವೆ. ಆದರೆ ಈ ಲಗ್ನವಿಧಿಯೇ ಪ್ರಚಾರ ದಲ್ಲಿಲ್ಲದ ದೇಶದಲ್ಲಿ ಪತಿಪತ್ನಿಯರೆಂಬ ಸಂಬಂಧವೇ ಇಲ್ಲ. ಆದುದರಿಂದ ಅಲ್ಲಿ ಪತಿಪತ್ನಿಯರ ಸಂಬಂಧದ ಕರ್ತವ್ಯಗಳೆಂಬ ಶಬ್ದವೇ ಕೇಳಬರುವುದಿಲ್ಲ. ಸ್ತ್ರೀಪುರುಷರು ಲಗ್ನ ಮಾಡಿಕೊಳ್ಳುವುದು ಪರಸ್ಪರರ ಸುಖದ ಸಲುವಾಗಿ. ಈ ಪದ್ಧತಿಯು ಬಹಳ ದಿನ ನೆಲೆಗೊಂಡಿತೆಂದರೆ, ಅದಕ್ಕೆ ಕರ್ತವ್ಯವೆಂಬ ಸ್ವರೂಪವು ಪ್ರಾಪ್ತವಾಗುತ್ತದೆ. ಒಂದು ವಿಕಾರವು ಮನುಷ್ಯನ ದೇಹದ ಮೇಲೆ ಜಾಜ್ವಲ್ಯವಾದ ಪರಿಣಾಮವನ್ನುಂಟುಮಾಡಿದರೆ ಅದನ್ನು ನಾವು ರೋಗವೆಂದು ಹೇಳುತ್ತೇವೆ. ಆದರೆ ಅದೇ ಪರಿಣಾಮವು ಕಣ್ಣಿಗೆ ತೋರ ದಂತೆ, ಮನಸ್ಸಿಗೆ ಹೊಳೆಯದಂತೆ ಅತ್ಯಂತ ಮಂದವಾಗಿ ಉಂಟಾದರೆ ಅದನ್ನೇ ಪ್ರಕೃತಿ ಅಥವಾ ಸ್ವಭಾವವೆಂದು ಹೇಳುತ್ತೇವೆ. ಈ ಮಂದ ಗತಿಯ ಮೂಲಕ ರೋಗವೆಂಬ ಕೆಟ್ಟ ಸ್ವರೂಪವು ನಮ್ಮ ಕಣ್ಣಿಗೆ ಕಾಣುವು ದಿಲ್ಲ. ಆದರೂ ಶಾಸ್ತ್ರೀಯ ದೃಷ್ಟಿಯಿಂದ ಅದು ರೋಗವೆ ಸರಿ! ಆದರಂತೆ, ಪತ್ನಿಯನ್ನು ಕುರಿತ ಅನವಶ್ಯಕವಾದ ಹೆಚ್ಚಿನ ಆಸಕ್ತಿಯಿರುವುದು ನಿಜವಾಗಿ ಒಂದು ರೋಗ. ಆದರೂ ಸಾವಿರಾರು ವರ್ಷಗಳಿಂದ ಅದು ದಿನಚರ್ಯೆಯಲ್ಲಿ ಇಳಿದು ಬಂದುದರಿಂದ ನಾವು ಅದಕ್ಕೆ ಕರ್ತವ್ಯವೆಂಬ ಮಧುರ ಮನ ಮೋಹಕವಾದ ಹೆಸರನ್ನು ಕೊಟ್ಟಿರುತ್ತೇವೆ. ಲಗ್ನಸಮಾರಂಭವು ನಡೆದಾಗ ಮಂಗಲವಾದ್ಯಗಳನ್ನು ಬಾರಿಸಬೇಕು, ಬ್ರಾಹ್ಮಣರು ಮಂತ್ರಗಳನ್ನು ಹೇಳ ಬೇಕು, ದೇವ ಮತ್ತು ಅಗ್ನಿನಾರಾಯಣನನ್ನು ಸಾಕ್ಷಿಯಾಗಿಟ್ಟುಕೊಳ್ಳ ಬೇಕು; ಮತ್ತು ಜನರು ಹೂವು ಅಕ್ಷತೆಗಳನ್ನು ಮಳೆಗರೆಯಬೇಕು. ಲಗ್ನ ವಾದ ಮೇಲೆ ಸ್ತ್ರೀಯ ಸಲುವಾಗಿ ಗಂಡನು ಬೇಕುಬೇಕಾದ ಅಮಾನುಷ ಕೃತ್ಯಗಳನ್ನು ಮಾಡಿದರೂ ಅವುಗಳನ್ನು ಕೌಟುಂಬಿಕ ಕರ್ತವ್ಯಗಳೆಂದು ಹೆಮ್ಮೆಯಿಂದ ಹೇಳಬೇಕು! ಈ ಮಾದರಿಯು ಜಗತ್ತಿನಲ್ಲಿ ಎಲ್ಲೆಲ್ಲಿಯೂ ಕಂಡುಬರುತ್ತಿದೆ. ನಾವು ಸಾಮಾನ್ಯ ವ್ಯವಹಾರದಲ್ಲಿ ಕರ್ತವ್ಯವೆಂದು

ಹೇಳುವುದರ ಉಪಯೋಗವು ಕೊಂಚಮಟ್ಟಿಗಾದರೂ ಆಗುತ್ತದೆ. ಕರ್ತವ್ಯದ ಜ್ಞಾನವು ಕೊಂಚವಾದರೂ ಇರುವುದರಿಂದ ಮನುಷ್ಯನು ಕೇವಲ ಪರಿಸ್ಥಿತಿಗೆ ತಲೆ ಬಗ್ಗಿಸದೆ ತಕ್ಕ ಮಟ್ಟಿಗಾದರೂ ಮನುಷ್ಯಸ್ಥಿತಿಯನ್ನು ಉಳಿಸಿಕೊಂಡಿರುತ್ತಾನೆ. ಇದಕ್ಕಿಂತ ಹೆಚ್ಚಿನ ವಿಚಾರವು ಮನಸ್ಸಿನಲ್ಲಿ ಹುಟ್ಟಲು ಶಕ್ಯವಿಲ್ಲದಂಥ ಪಾಮರರನ್ನು ಅದಕ್ಕಿಂತ ಕೆಳಗಿನ ಮಟ್ಟಕ್ಕೆ ಇಳಿಯದಂತೆ ಬಿಗಿದು ಹಿಡಿಯಲು ಮಾತ್ರ ಈ ಕರ್ತವ್ಯಕಲ್ಪನೆಯ ಉಪಯೋಗವಾಗುತ್ತದೆ. ಆದರೆ ಕರ್ಮಯೋಗಿಯಾಗಬೇಕೆಂಬ ಹಂಬಲು ಉಳ್ಳವರು, ಕರ್ತವ್ಯದ ಈ ಸಾಮಾನ್ಯ ಕಲ್ಪನೆಯನ್ನು ತಮ್ಮ ತಲೆಯೊಳಗಿಂದ ಹೊಡೆದೋಡಿಸಲೇ ಬೇಕು. ಇಂಥ ಕರ್ತವ್ಯದಿಂದ ನಮ್ಮ – ನಿಮ್ಮಂಥವರಿಗೆ ಉಪಯೋಗವಿಲ್ಲ. ಪ್ರಪಂಚಕ್ಕಾಗಿ ನಾವು ಏನನ್ನಾದರೂ ಮಾಡಬೇಕೆಂದು ಮನಸ್ಸಿಗೆ ತೋಚಿದರೆ ಅವಶ್ಯವಾಗಿ ಮಾಡೋಣ; ಆದರೆ ಈ ಕರ್ತವ್ಯವೆಂಬ ಪಿಶಾಚಗ್ರಸ್ತರಾಗಿ ಮಾಡುವುದು ಬೇಡ. ಹೆದರಿಕೆಯಿಂದ ಮಾಡಿದ ಕೆಲಸದಿಂದ ಆಸಕ್ತಿಯುಂಟಾಗುವುದು ನಿಶ್ಚಿತ. ಇವರನ್ನು ಕುರಿತ ಕರ್ತವ್ಯ, ಅವರನ್ನು ಕುರಿತ ಕರ್ತವ್ಯವೆಂಬ ಕಲ್ಪನೆಗಳನ್ನೇ ಮನಸ್ಸಿನಲ್ಲಿ ತರಕೂಡದು. ನಮ್ಮ ದೇಹ, ನಮ್ಮ ಮನಸ್ಸು, ನಮ್ಮ ಸರ್ವಸ್ವವನ್ನೆಲ್ಲ ಪರಮೇಶ್ವರನ ಚರಣದಲ್ಲಿ ಅರ್ಪಿಸಬೇಕು. ಜಾಜ್ವಲ್ಯಮಾನವಾಗಿ ಉರಿಯುತ್ತಿರುವ ಈ ಸಂಸಾರಾಗ್ನಿ ನಮ್ಮೆಲ್ಲರ ಪೂರ್ಣಾಹುತಿಯನ್ನು ತೆಗೆದುಕೊಳ್ಳಲು ಬಯಸುತ್ತಲಿದೆ. ಇದರ ಜ್ವಾಲೆಗಳು ಪ್ರತಿ ಕ್ಷಣದಲ್ಲಿ ಸಮೀಪಕ್ಕೆ ಬರುತ್ತಿವೆ. ಇದರ ದುಃಸಹವಾದ ತಾಪ ನಮ್ಮನ್ನು ಸುಡುತ್ತಲಿದೆ. ಮಿತ್ರರೇ, ಈ ಅಮೃತಕಲಶವನ್ನು ಕೊಳ್ಳಿರಿ. ಆಗ ಇದೇ ಅಗ್ನಿ ಚಂದ್ರನಂತೆ ಶೀತಲವಾಗುವುದು; ಮತ್ತು ನಿಮಗೆ ಅನುಪಮೇಯವಾದ ಸುಖಪ್ರಾಪ್ತಿಯಾಗುವುದು. ನಿಜವಾಗಿ ನೋಡಿದರೆ, ಮಾಡುವವನೂ ಮಾಡಿಸುವವನೂ ಬೇರೆಯಾಗಿದ್ದು ನಾವು ಕೇವಲ ಅವನ ಕೈಯೊಳಗಿನ ಗೊಂಬೆಗಳು. ಹೀಗಿದ್ದರೂ ಒಂದು ಕರ್ಮಕ್ಕಾಗಿ ನಿಮಗೆ ಮೆಚ್ಚು ಬೇಕೆಂದೆನಿಸಿದರೆ ಮತ್ತೊಂದು ಕರ್ಮಕ್ಕಾಗಿ ನೀವು ಬಡಿತ ತಿನ್ನುವುದಕ್ಕೂ ಸಿದ್ಧರಿರಬೇಕು. ಬಡಿತವು ಬೇಡವಾಗಿದ್ದರೆ ಮೆಚ್ಚಿನ ಆಸೆಯನ್ನಾದರೂ ಬಿಡಬೇಕು. ದಂಡನೆ ಮತ್ತು ಮೆಚ್ಚು ಇವೆರಡೂ ಸಹೋದರರು, ಸಂಲಗ್ನರು ಆಗಿರುವುದರಿಂದ ಒಂದರ ಹಿಂದೆ ಮತ್ತೊಂದು ಬರಲೇ ಬೇಕು. ಅವುಗಳ ಜೊತೆ ಎಂದೂ ಅಗಲುವುದಿಲ್ಲ. ನಿಮ್ಮ ಒಂದು ಬದಿಗೆ ಸುಖವೂ ಮತ್ತೊಂದು ಬದಿಗೆ ದುಃಖವೂ

ಜೊತೆಯಲ್ಲಿಯೇ ನಡೆಯುತ್ತಲಿವೆ. ಒಂದು ಬದಿಗೆ ಜೀವಿತವಿದ್ದರೆ, ಮತ್ತೊಂದು ಬದಿಗೆ ಮೃತ್ಯುವು ನಿಂತಿರುತ್ತದೆ. ಮೃತ್ಯುವಿನ ಆಚೆಗೆ ಹೋಗ ಬೇಕಾಗಿದ್ದರೆ ನೀವು ಜೀವಿತದ ಆಶೆಯನ್ನೂ ತೊರೆಯಬೇಕಾಗುವುದು. ಆ ಸ್ಥಿತಿಯನ್ನು ಹೊಂದಿದ ಮೇಲೆ ನಿಮಗೆ ಈ ಜೀವಿತವೂ ಮೃತ್ಯುವೂ ಸಮನಾಗಿಯೇ ತೋರುವವು. ಆದುದರಿಂದ ದುಃಖವಿಲ್ಲದ ಸುಖದ ಜೀವಿತವೂ ಮೃತ್ಯುವಿಲ್ಲದ ಜೀವಿತವೂ ಅಸಂಭವವನೀಯವೂ ಸಣ್ಣ ಹುಡು ಗರಿಗೆ ಮಾತ್ರ ಶೋಭಿಸುವ ಮಾತೂ ಆಗಿರುವುದೆಂಬುದು ನಿಃಸಂದೇಹ ವಾಗಿದೆ. ಈ ಸ್ಥಿತಿಯ ಅವಶ್ಯಕತೆಯು ಜ್ಞಾನಮಯ ದೃಷ್ಟಿಯುಳ್ಳವರಿಗೆ ಬೇಗನೆ ಹೊಳೆದು ಈ ಕಲ್ಪನೆಯನ್ನು ಆ ಕ್ಷಣದಲ್ಲಿಯೇ ತ್ಯಜಿಸಿ ಅವರು ಸುಖಿಗಳಾಗುತ್ತಾರೆ. ನೀವು ಮಾಡುವ ಕಾರ್ಯಗಳಿಗಾಗಿ ಸ್ತುತಿಪಾಠ ಗಳನ್ನಾಗಲಿ ಮೆಚ್ಚನ್ನಾಗಲಿ ಸರ್ವಥಾ ಬಯಸಬೇಡಿರಿ. ಒಂದು ಸತ್ಕೃತ್ಯ ವನ್ನು ಮಾಡುವಷ್ಟರಲ್ಲಿ ಅದಕ್ಕಾಗಿ ನಿಮಗೆ ಗೌರವ ಸಿಗಬೇಕೆಂದು ಬಯ ಸುತ್ತೀರಿ. ಯಾವುದಾದರೊಂದು ನಿರಾಶ್ರಿತರ ನಿಧಿಗೆ ಸ್ವಲ್ಪ ಹಣವನ್ನು ಕೊಟ್ಟ ಕೂಡಲೇ ನಿಮ್ಮ ಹೆಸರು ಯಾವ ಯಾವ ಪತ್ರಿಕೆಗಳಲ್ಲಿ ಪ್ರಕಟ ವಾಯಿತೆಂಬುದನ್ನು ಹುಡುಕತೊಡಗುತ್ತೀರಿ. ನಿಮ್ಮ ಮನಸ್ಸಿನಲ್ಲಿ ದುರಾ ಶೆಯು ಹೀಗೆ ತುಂಬಿ ತುಳುಕುತ್ತಿರುವಾಗ ಅದರಿಂದ ದುಃಖವು ಪ್ರಾಪ್ತವಾಗ ಬಾರದೆಂದರೆ ಸಾಧ್ಯವೆ? ಇಡಿಯ ಪ್ರಪಂಚಕ್ಕೇ ಮಹದುಪಕಾರವನ್ನು ಮಾಡಿದ ಮಹಾತ್ಮರು ತಮ್ಮ ಹೆಸರನ್ನು ಪ್ರಪಂಚದ ಕಿವಿಗೆ ಬೀಳದಂತೆ ಮಾಡಿ ಈ ಪ್ರಪಂಚವನ್ನು ಬಿಟ್ಟುಹೋದರು. ಬುದ್ಧ ಕ್ರಿಸ್ತರನ್ನು ಮೀರಿದ ಅನೇಕ ಮಹಾತ್ಮರು ತಮ್ಮ ಗೌರವವನ್ನೆಂದೂ ಬಯಸಲಿಲ್ಲ. ಪ್ರತಿ ಯೊಂದು ದೇಶದಲ್ಲಿಯೂ ಇದುವರೆಗೆ ಅನೇಕ ಮಹಾತ್ಮರು ಜನ್ಮವೆತ್ತಿ ಸದ್ದು ಮಾಡದೆ ತಮ್ಮ ಅವತಾರಕಾರ್ಯವನ್ನು ಮುಗಿಸಿಕೊಂಡು ಹೋದರು. ದೇಹಧಾರಿಗಳಾಗಿರುವಾಗ ಪ್ರಪಂಚಕ್ಕೆ ಅವರು ಅನಂತ ಉಪಕಾರವನ್ನು ಮಾಡಿಹೋದರು. ಅವರ ವಿಚಾರಗಳೇ ಬುದ್ಧ ಮತ್ತು ಕ್ರಿಸ್ತ ರೂಪದಿಂದ ನಮಗೆ ಪ್ರತ್ಯಕ್ಷವಾಗಿದ್ದರೂ ಸ್ವತಃ ಅವರ ದರ್ಶನವು ನಮಗೆ ಆಗಿರುವುದಿಲ್ಲ. ಇಷ್ಟೇ ಅಲ್ಲ; ಅವರ ಹೆಸರನ್ನು ಸಹ ನಾವು ಕೇಳಿರುವುದಿಲ್ಲ. ತಮ್ಮ ಜ್ಞಾನದ ಪರಿಣಾಮದಿಂದ ತಮ್ಮ ಹೆಸರು ಜಗತ್ತಿನಲ್ಲಿ ಮೊಳಗಬೇಕು, ತಮ್ಮ ಕೀರ್ತಿಯು ಹಬ್ಬಬೇಕು ಎಂದು ಕೂಡ ಅವರು ಎಂದೂ ಬಯಸಲಿಲ್ಲ.

ಪ್ರಪಂಚದಲ್ಲಿ ತಮ್ಮ ವಿಚಾರಗಳನ್ನು ಮಾತ್ರ ಹರಡಿಬಿಟ್ಟರೆ ತಾವು ಕೃತ ಕೃತ್ಯರಾದೆವೆಂದು ಅವರು ತಿಳಿದರು. ಇಂಥ ಕಾರ್ಯಕ್ಕಾಗಿ ತಮ್ಮ ಹೊಗಳಿಕೆಯನ್ನು ಕೇಳಬೇಕು ಅಥವಾ ಒಂದು ಹೊಸ ಧರ್ಮಪಂಥವನ್ನು ಸ್ಥಾಪಿಸಬೇಕು ಎಂಬ ವಿಚಾರವೇ ಅವರ ಮನಸ್ಸಿನಲ್ಲಿ ಬರುವುದಿಲ್ಲ. ಅವರ ವೃತ್ತಿಯು ಶುದ್ಧ ಸಾತ್ವಿಕತೆಯ ಮೂರ್ತಿಯಾಗಿರುತ್ತದೆ. ಪ್ರೇಮರಸದಿಂದ ಅವರು ತುಂಬಿ ತುಳುಕುತ್ತಾರೆ. ಹೋರಾಟ ಚಳುವಳಿ ಅಥವಾ ಚಟುವಟಿಕೆಯೆಂಬುದು ಅವರ ಸ್ವಭಾವಕ್ಕೆ ಒಪ್ಪುವುದಿಲ್ಲ. ಹಿಮಾಲಯದ ಒಂದು ಗುಹೆಯಲ್ಲಿ ನನಗೆ ಇಂಥ ಒಬ್ಬ ಯೋಗಿಯ ದರ್ಶನವಾಯಿತು. ಅವನ ಅಹಂಕಾರ ಸಂಪೂರ್ಣವಾಗಿ ನಷ್ಟವಾಗಿತ್ತು. ಅವನ ಬದ್ಧ ಮಾನವ ರೂಪವು ಪೂರ್ಣ ನಷ್ಟವಾಗಿ ಅವನು ಶುದ್ಧ ಪರಮೇಶ್ವರನ ಸ್ವರೂಪವೇ ಆಗಿದ್ದನು. ಒಂದು ಕೈಯನ್ನು ಒಂದು ಪ್ರಾಣಿಯು ಕಚ್ಚಿದರೆ, ಅವನು ಮತ್ತೊಂದು ಕೈಯನ್ನು ಮುಂದೆ ಚಾಚುತ್ತಿದ್ದನು. ಎಲ್ಲವೂ 'ಪರಮೇಶ್ವರನ ಇಚ್ಛೆಯ ಪ್ರಕಾರವೇ' ನಡೆಯುತ್ತದೆಂದು ಅವನ ದೃಢವಾದ ನಂಬಿಕೆ ಇತ್ತು. ಯಾರಿಗೂ ಬಹುಶಃ ಅವನ ದರ್ಶನವಾಗುತ್ತಿದ್ದಿಲ್ಲ. ಆದರೂ ಅವನು ಪ್ರೇಮ ಜ್ಞಾನಗಳ ಚಿನ್ಮೂರ್ತಿಯೇ ಆಗಿದ್ದನು.

ಜ್ಞಾನಿಗಳಾಗಿದ್ದರೂ ರಜೋಗುಣಿಗಳಾದ ಪುರುಷರ ಸ್ಥಿತಿ ಈ ಸಾತ್ವಿಕ ಪುರುಷರಿಗಿಂತ ಕೆಳಗಿನದು. ಸಾತ್ವಿಕ ಪುರುಷರಿಂದ ದೊರೆತ ಜ್ಞಾನವನ್ನು ಇವರು ಜಗತ್ತಿಗೆ ಬೀರುವರು. ಅತ್ಯುಚ್ಚ ಮಟ್ಟದ ಸಾತ್ವಿಕ ಪುರುಷರು ಸಂಗ್ರಹಿಸಿಟ್ಟ ಶುದ್ಧ ಜ್ಞಾನವನ್ನು ಜಗತ್ತಿನಲ್ಲಿ ಪಸರಿಸುವ ಕಾರ್ಯವನ್ನು ಬುದ್ಧ ಕ್ರಿಸ್ತನಂಥವರು ಮಾಡುತ್ತಾರೆ. 'ನಾನು ಇಪ್ಪತ್ತೈದನೇ ಬುದ್ಧನು' ಎಂದು ಗೌತಮ ಬುದ್ಧನು ಇಡೀ ಪ್ರಪಂಚಕ್ಕೇ ಸಾರಿ ಹೇಳಿದ್ದಾನೆ. ಹಿಂದಿನ ಇಪ್ಪತ್ತುನಾಲ್ಕು ಬುದ್ಧರು ಯಾರು, ಅವರು ಏನು ಹೇಳಿದರು ಎಂಬ ಸಂಗತಿ ಮಾನವಜಾತಿಗೆ ಉಪಲಬ್ಧವಿಲ್ಲ. ಅವರ ಜ್ಞಾನರಾಶಿಯ ಬಲದಿಂದಲೇ ತನ್ನ ಜ್ಞಾನರೂಪದ ಕಟ್ಟಡವನ್ನು ಕಟ್ಟಿದ ಇಪ್ಪತ್ತೈದನೇ ಬುದ್ಧನು ಮಾತ್ರ ನಮಗೆ ಪರಿಚಿತನಾಗಿದ್ದಾನೆ. ಕೇವಲ ವಿಚಾರಕ್ಕೆ ಎಂಥ ಅದ್ಭುತ ಶಕ್ತಿ ಇರುವುದೆಂಬುದು ಆ ಪೂರ್ವದ ಬುದ್ಧರಿಗೆ ಚನ್ನಾಗಿ ಗೊತ್ತಿತ್ತು. ಮನುಷ್ಯ ಜಾತಿಗೆ ಗೊತ್ತಿಲ್ಲದ ಒಂದು ಗುಹೆಯಲ್ಲಿ ಹೋಗಿ ಕುಳಿತುಕೊಂಡು ಕೇವಲ ನಾಲ್ಕೇ ವಿಚಾರತರಂಗಗಳನ್ನು ಹುಟ್ಟಿಸಿ

ದರೂ ಅವು ಪ್ರಪಂಚದಲ್ಲಿ ಅನಂತ ಕಾಲದ ವರೆಗೆ ಬಾಳುವವೆಂಬುದು ಅವರ ಮನಸ್ಸಿಗೆ ನಿಶ್ಚಿತವಾಗಿ ಗೊತ್ತಿತ್ತು. ಇವು ನಾಲ್ಕೇ ವಿಚಾರತರಂಗ ಗಳಾದರೂ ಎಷ್ಟೋ ಗುಹೆಗಳನ್ನು ಭೇದಿಸಿ ಅನೇಕ ಸಮುದ್ರಗಳನ್ನು ದಾಟಿ ಪ್ರಪಂಚವನ್ನೆಲ್ಲ ಪ್ರವಾಸ ಮಾಡಿ ಎಲ್ಲೆಡೆಯನ್ನೂ ವ್ಯಾಪಿಸಿಕೊಂಡಿರುವ ಸಾಮರ್ಥ್ಯವು ಅವುಗಳಿಗುಂಟು. ಅವುಗಳನ್ನು ಗ್ರಹಣಮಾಡಲು ಯೋಗ್ಯ ವಾದ ಮಾನವೀ ಅಂತಃಕರಣವು ಸಿಕ್ಕ ಕೂಡಲೇ ಅದರಲ್ಲಿ ಪ್ರವೇಶಮಾಡಿ ಆಶ್ಚರ್ಯಕರವಾದ ಜಾಗ್ರೃತಿಯನ್ನುಂಟುಮಾಡುವವು. ಈ ವಿಚಾರಗಳಿಂದ ಎಚ್ಚರಗೊಂಡ ಸ್ತ್ರೀ ಪುರುಷರು ಅವುಗಳ ವ್ಯವಹಾರ್ಯ ರೂಪವನ್ನು ಆಚರಣೆಯಲ್ಲಿ ವ್ಯಕ್ತಮಾಡುತ್ತಾರೆ. ಜಗತ್ತಿನ ಕಲ್ಯಾಣಕ್ಕಾಗಿಯಾದರೂ ಎಲ್ಲ ಕಡೆಯಲ್ಲಿ ತಿರುಗಾಡಿ ಜ್ಞಾನವನ್ನು ಉಪದೇಶಮಾಡಬೇಕಾದರೆ ವಾದ ವಿವಾದಗಳಾಗಬೇಕಾಗುವವು. ಅನೇಕ ತರದ ತೊಂದರೆಗಳಿಗೂ ಅಡ್ಡಿ ಗಳಿಗೂ ದಿನವೂ ಎದುರಾಗಬೇಕಾಗುವುದೆಂಬುದು ಸ್ಪಷ್ಟವಿದೆ. ಇದನ್ನೆಲ್ಲ ಮಾಡುವುದಕ್ಕೆ ಬಹು ಮಟ್ಟಿಗೆ ರಜೋಗುಣವು ಬೇಕಾಗುವುದು. ಆದ್ದ ರಿಂದಲೇ ಸತ್ವಗುಣೈಕಮೂರ್ತಿಗಳಾದ ಮಹಾತ್ಮರು ಪ್ರಪಂಚವನ್ನು ಪ್ರವೇಶಿಸಿ ತಮ್ಮ ಜ್ಞಾನವನ್ನು ವ್ಯಕ್ತಮಾಡುವ ಗೊಡವೆಗೆ ಹೋಗುವುದಿಲ್ಲ. ಕೇವಲ ಬ್ರಹ್ಮರೂಪರಾದ ಮೇಲೆ, ಪ್ರಪಂಚದ ಅಸ್ತಿತ್ವದ ಜ್ಞಾನವಾಗು ವಷ್ಟು ರಜೋಗುಣವೂ ಅವರಲ್ಲಿರುವುದಿಲ್ಲ. ಪ್ರತ್ಯಕ್ಷ ಕಾರ್ಯಕರ್ತರು ಗಳಾದ ಬುದ್ಧ ಕ್ರಿಸ್ತ ಮೊದಲಾದವರು ಎಂಥ ಶ್ರೇಷ್ಠ ಪುರುಷರಾಗಿದ್ದರೂ ಅವರಲ್ಲಿ ಅಜ್ಞಾನದ ಒಂದಂಶವಾದರೂ ಉಳಿದುಕೊಂಡಿರಲೇಬೇಕು. ನಮ್ಮ ಹೃದಯದಲ್ಲಿ ಅಶುದ್ಧತ್ವವು ಕೊಂಚವಾದರೂ ಉಳಿದುಕೊಂಡಿರದಿದ್ದರೆ ಪ್ರಪಂಚದಲ್ಲಿ ಒಂದು ಕಾರ್ಯ ಮಾಡುವುದು ಶಕ್ಯವಿಲ್ಲ. ಯಾವ ಕರ್ಮ ವಾದರೂ ಸರಿ, ಕರ್ಮವೆಂದ ಮೇಲೆ ಅದಕ್ಕೊಂದು ಗುರಿ ಮತ್ತು ಅದರಲ್ಲಿ ಆಸಕ್ತಿ ಎಂಬಿವು ಅಲ್ಪಾಂಶದಿಂದಲಾದರೂ ಸಮಾವಿಷ್ಟವಾಗಿರಲೇ ಬೇಕು. ಕರ್ಮದ ಸ್ವಭಾವವೇ ಇದು. ಆದರೆ ಒಂದು ಕ್ಷುದ್ರ ಕಾರ್ಯವನ್ನು ಮಾಡಿ ಮಹತ್ಕೀರ್ತಿಯನ್ನು ಬಯಸುವುದು ಮೂರ್ಖತನವಾಗುವುದು. ಪರಮಾತ್ಮನ ಅಪ್ಪಣೆಯಿಲ್ಲದೆ ಒಂದು ಹುಲ್ಲುಕಡ್ಡಿಯು ಕೂಡ ಅತ್ತಿತ್ತ ಅಲುಗಲಾರದು. ಅವನು ಅಣುರೇಣುಪ್ರಮಾಣಗಳಾದ ಕೀಟಗಳ ಯೋಗಕ್ಷೇಮವನ್ನು ಕೂಡ ನೋಡಿಕೊಳ್ಳುತ್ತಾನೆ. ಅಂಥ ಪರಮಾತ್ಮ

ನೆದುರಿಗೆ ನಿಂತುಕೊಂಡು ನಮ್ಮ ಕ್ಷುದ್ರ ಕಾರ್ಯದ ಮಹತ್ವವನ್ನು ಗುಡ್ಡ ದಷ್ಟು ದೊಡ್ಡದಾಗಿ ಬೆಳೆಸುವುದು ನಮಗೆ ಶೋಭಿಸುವುದೇ? ನಿಜವಾಗಿ ಯೋಚಿಸಿದರೆ ಇದರಿಂದ ಪರಮಾತ್ಮನಿಗೆ ಅಪಮಾನ ಮಾಡಿದಂತೆ. ಅವ ನೆದುರಿಗೆ ನಿಂತುಕೊಂಡು 'ಪರಮೇಶ್ವರ, ನಿನ್ನ ಇಚ್ಛೆಯಂತೆ ಆಗಲಿ' ಎಂದು ಬೇಡಿಕೊಳ್ಳುವುದೇ ನಮಗೆ ಯೋಗ್ಯವಾದುದು.

ಸತ್ವಗುಣೈಕ ಮೂರ್ತಿಗಳಾದ ಪುರುಷರು ಪ್ರಪಂಚದಲ್ಲಿ ಪ್ರತ್ಯಕ್ಷವಾಗಿ ಏನೂ ಕಾರ್ಯ ಮಾಡುವುದಿಲ್ಲ. ಏಕೆಂದರೆ ಅವರಲ್ಲಿ ಆಸಕ್ತಿ ಲವಲೇಶದಷ್ಟೂ ಉಳಿದಿರುವುದಿಲ್ಲ. ಬ್ರಹ್ಮನಲ್ಲಿ ಲೀನವಾದ ವೃತ್ತಿಯುಳ್ಳವರೂ ಬ್ರಹ್ಮ ರೂಪದ ವಾಸನೆಯುಳ್ಳವರೂ ಯಾವಾಗಲೂ ಬ್ರಹ್ಮಚಿಂತನವೇ ತಮ್ಮ ಉದ್ಯೋಗವನ್ನಾಗಿಟ್ಟುಕೊಂಡವರೂ ಮಾಡತಕ್ಕದ್ದೇನೂ ಉಳಿದಿರುವುದಿಲ್ಲ. ಇಂಥವರು ಅತಿ ಶ್ರೇಷ್ಠ ಮಟ್ಟದವರು. ಇಂಥವರನ್ನು ಬಿಟ್ಟು ಉಳಿದವ ರೆಲ್ಲರೂ ಕರ್ಮವನ್ನು ಮಾಡಲೇ ಬೇಕಾಗುವುದು. ಆದರೆ ಕರ್ಮವನ್ನು ಮಾಡುತ್ತಿರುವಾಗ ಅದರಿಂದ ವಿಶ್ವದೊಳಗಿನ ಒಂದೇ ಒಂದು ಚಿಕ್ಕ ಕ್ರಿಮಿಗೂ ನಾವು ಹಿತವನ್ನು ಮಾಡುತ್ತಿರುವೆವೆಂಬ ವಿಚಾರವು ಕೂಡ ನಮ್ಮ ಮನಸ್ಸಿನಲ್ಲಿ ಬರಲಾರದು. ಏಕೆಂದರೆ ಸ್ವತಂತ್ರ ರೀತಿಯಿಂದ ಹಾಗೆ ನೆರ ವಾಗುವುದು ನಮಗೆ ಶಕ್ಯವೇ ಇಲ್ಲ. ಈ ಪ್ರಪಂಚವೆಂಬ ಗರಡೀಮನೆಯಲ್ಲಿ ನಾವು ನಮ್ಮ ಬೆಳೆವಣಿಗೆಯ ಸಲುವಾಗಿಯೇ ಸಾಧನವನ್ನು ಮಾಡುತ್ತಿರು ತ್ತೇವೆ. ಕರ್ಮಮಾಡುವುದೆಂಬ ವಿಶಿಷ್ಟವಾದ ಅಧಿಕಾರವು ಪರಮೇಶ್ವರನ ಕೃಪೆಯಿಂದ ನಮಗೆ ಪ್ರಾಪ್ತವಾಗಿದೆಯೆಂಬ ಭಾವನೆ ನಮ್ಮ ಮನಸ್ಸಿನಲ್ಲಿ ಚನ್ನಾಗಿ ನೆಲೆಗೊಂಡಿದ್ದರೆ ಆಸಕ್ತಿಯು ಎಂದಿಗೂ ಉಂಟಾಗುವುದಿಲ್ಲ. ನಮ್ಮ ನಿಮ್ಮಂಥ ಲಕ್ಷಗಟ್ಟಲೆ ಜನರು ತಾವು ಬಹು ದೊಡ್ಡವರೆಂಬ ಗುಂಗಿನಲ್ಲಿಯೇ ಮುಳುಗಿರುತ್ತಾರೆ. ಆದರೆ ಅಂಥವರು ಮರಣ ಹೊಂದಿದರೆ ಲೋಕವು ಅವರನ್ನು ಐದು ನಿಮಿಷದಲ್ಲಿಯೇ ಮರೆತುಬಿಡುವುದು.

ಪರಮೇಶ್ವರನ ಬಯಕೆಗೆ ವಿರುದ್ಧವಾಗಿ ನಾವೂ ನೀವೂ ಒಂದು ನಿಮಿಷವಾದರೂ ಬದುಕಿ ಬಾಳುವುದು ಶಕ್ಯವಿದೆಯೆ? ಎಲ್ಲವನ್ನು ಮಾಡು ವವನೂ ಮಾಡಿಸುವವನೂ ಪರಮಾತ್ಮನೇ. ಎಲ್ಲ ಸಾಮರ್ಥ್ಯವೂ ಅವನದೇ. ವಿಶ್ವದೊಳಗಿನ ಎಲ್ಲ ಪದಾರ್ಥಗಳಲ್ಲಿ ಕಂಡುಬರುವ ಸಾಮರ್ಥ್ಯವು ಅವನ ಬಯಕೆಯನ್ನೇ ಹೊಂದಿಕೊಂಡಿರುವುದು. ಅವನ ಆಜ್ಞೆಯಿಂದಲೇ

ಗಾಳಿಯು ಬೀಸುತ್ತದೆ, ಸೂರ್ಯನು ಪ್ರಕಾಶಿಸುತ್ತಾನೆ, ಜನರು ಬದುಕಿ ಬಾಳುತ್ತಾರೆ, ಮತ್ತು ಮರಣವನ್ನೂ ಹೊಂದುತ್ತಾರೆ. ಸರ್ವವೂ ಅವನೇ. ಸರ್ವಾಂತರ್ಯಾಮಿಯೂ ಅವನೇ. ಅವನನ್ನು ಪೂಜಿಸುವುದಕ್ಕಿಂತ ಹೆಚ್ಚಿನ ಭಾಗ್ಯ ನಮಗಿಲ್ಲ. ಸರ್ವಕರ್ಮದ ಫಲವನ್ನೂ ಅವನಿಗರ್ಪಿಸಬೇಕು. ಸತ್ಕರ್ಮಗಳನ್ನು ಅವನಿಗಾಗಿಯೇ ಅವನ ಆಜ್ಞೆಯಿಂದಲೇ ಮಾಡತಕ್ಕದ್ದೆಂಬ ದೃಢವಾದ ಭಾವನೆಯನ್ನು ತಾಳಬೇಕು. ಹಾಗಾದರೆ ನಮ್ಮಲ್ಲಿ ಅನಾಸಕ್ತಿಯು ಹುಟ್ಟುವುದು; ನಮ್ಮನ್ನು ಬಿಗಿದಿರುವ ಪಾಶವು ಹರಿದು ನಾವು ಮುಕ್ತರಾಗುವೆವು. ಮುಕ್ತಿಯನ್ನು ಸಂಪಾದಿಸುವುದೇ ಯೋಗದ ಸಾಧ್ಯ.

## ೮. ಕರ್ಮಯೋಗದ ಗುರಿ

ಭಿನ್ನ ಭಿನ್ನ ಮಾರ್ಗಗಳನ್ನು ಅವಲಂಬಿಸಿದರೆ ಕೊನೆಗೆ ಮುಟ್ಟುವ ಗುರಿ ಒಂದೇ ಎಂಬ ವೇದಾಂತದ ತತ್ವವು ಅತ್ಯುಚ್ಚ ತರಗತಿಯದು. ಈ ಮಾರ್ಗಗಳು ಸಾಮಾನ್ಯವಾಗಿ ಕರ್ಮಯೋಗ, ಭಕ್ತಿಯೋಗ, ರಾಜಯೋಗ, ಜ್ಞಾನಯೋಗ ಎಂದು ನಾಲ್ಕು ವಿಧವಾಗಿರುವವು. ಆದರೆ ಈ ಭಿನ್ನ ಮಾರ್ಗ್ಗಗಳಲ್ಲಿ ಪರಸ್ಪರ ಸಂಬಂಧವಿಲ್ಲೆಂದೂ ಅವು ಪರಸ್ಪರ ವಿರೋಧಿಗಳೆಂದೂ ಯಾರೂ ತಿಳಿಯಕೂಡದು. ಒಂದರಲ್ಲಿ ಇನ್ನೊಂದು ಸಮಾವೇಶವಾಗಿ ಅವು ಕೂಡಿಕೊಂಡು ಸಾಗುತ್ತವೆ. ಯಾವ ಮಾರ್ಗದ ಲಕ್ಷಣಗಳು ವಿಶೇಷ ಪ್ರಾಬಲ್ಯದಿಂದ ಕಂಡುಬರುವವೋ ಆ ಮಾರ್ಗದ ಹೆಸರು ಸಾಮಾನ್ಯತಃ ಪ್ರಾಪ್ತವಾಗುತ್ತದೆ. ಒಬ್ಬನು ಒಂದು ಮಾರ್ಗವನ್ನು ಅವಲಂಬಿಸಿದ್ದರೆ ಅವನಲ್ಲಿ ಉಳಿದ ಮಾರ್ಗಗಳ ಲಕ್ಷಣಗಳೇನೂ ಕಂಡುಬರುವುದಿಲ್ಲವೆಂದಲ್ಲ. ಒಬ್ಬನು ಕರ್ಮಯೋಗಿಯಾಗಿದ್ದರೆ, ಅವನಲ್ಲಿ ಉಳಿದ ಕರ್ಮಗಳ ಲಕ್ಷಣಗಳೇನೂ ಕಾಣುವುದಿಲ್ಲವೆಂದಲ್ಲ. ಕರ್ಮಯೋಗಿಯು ಜ್ಞಾನಿಯೂ ಇರಬಹುದು. ಭಕ್ತನು ರಾಜಯೋಗಿಯೂ ಇರುವುದು ಶಕ್ಯವಿದೆ. ಆ ಆ ಮನುಷ್ಯರಲ್ಲಿ ವಿಶೇಷ ಪ್ರಾಧಾನ್ಯದಿಂದ ಕಂಡುಬರುವ ಮನಸ್ಸಿನ ಒಲವಿ

ಗನುಸರಿಸಿ ಈ ವಿಭಾಗಗಳು ಮಾಡಲ್ಪಟ್ಟಿವೆ. ಈ ನಾಲ್ಕೂ ಮಾರ್ಗಗಳು ಒಂದನ್ನೊಂದು ಸಮೀಪಿಸುತ್ತ ಕೊನೆಗೆ ಒಂದುಗೂಡುತ್ತವೆ. ವಿವಿಧ ಧರ್ಮ ಪಂಥಗಳೂ ವಿವಿಧ ಪೂಜೆ ಉಪಾಸನೆ ಕರ್ಮಪದ್ಧತಿಗಳೂ ನಮ್ಮನ್ನು ಒಂದೇ ಗುರಿಗೆ ಒಯ್ದು ಮುಟ್ಟಿಸುತ್ತವೆ.

ಆ ಧ್ಯೇಯವೆಂದರೇನೆಂಬುದನ್ನು ನಾನು ಮೊದಲೇ ತಿಳಿಸಿದ್ದೇನೆ. ಸ್ವಾತಂತ್ರ್ಯವೇ ನಮ್ಮ ಧ್ಯೇಯವೆಂದು ನನ್ನ ಮತ. ಅತಿ ಸೂಕ್ಷ್ಮ ಅಣು ರೇಣು ಮೊದಲ್ಗೊಂಡು ಮನುಷ್ಯನ ವರೆಗೂ, ನಿರ್ಜೀವ ನಿಶ್ಚೈತನ್ಯ ಪದಾರ್ಥಗಳನ್ನು ಮೊದಲುಮಾಡಿ ಅತ್ಯುಚ್ಚ ಜೀವಿಯಾದ ಮನುಷ್ಯ ಪ್ರಾಣಿಯ ವರೆಗೂ, ನಮ್ಮ ಸುತ್ತುಮುತ್ತಲೂ ಕಾಣಬರುವ ಪದಾರ್ಥ ಗಳೆಲ್ಲ ಸ್ವಾತಂತ್ರ್ಯಕ್ಕಾಗಿಯೇ ಸಾಹಸಪಡುತ್ತವೆ. ಈ ಸ್ವಾತಂತ್ರ್ಯಸಂಗ್ರಾಮದ ಪರಿಣಾಮವೇ ಈ ಸರ್ವ ಜಗತ್ತೆಂದು ನಿಜವಾಗಿ ಹೇಳಬಹುದು. ಪದಾರ್ಥಗಳೊಳಗಿನ ಪ್ರತಿಯೊಂದು ಅಣುವೂ ತನ್ನ ಒಂದು ವಿಶಿಷ್ಟ ಮಾರ್ಗವನ್ನು ಹಿಡಿದುಕೊಂಡು ಹೋಗಲಿಕ್ಕೂ ಉಳಿದ ಅಣುಗಳಿಂದ ದೂರ ಅಗಲಿ ಹೋಗಲಿಕ್ಕೂ ಯತ್ನಿಸುತ್ತದೆ. ಆದರೆ ಉಳಿದ ಅಣುಗಳು ಅದನ್ನು ತಡೆದು ಹಿಡಿಯುತ್ತವೆ. ನಮ್ಮ ಪೃಥ್ವಿಯು ಸೂರ್ಯನಿಂದ ದೂರ ಸಿಡಿದು ಹೋಗಲು ಯತ್ನಿಸುತ್ತದೆ. ಚಂದ್ರನು ಪೃಥ್ವಿಯ ಹಿಡಿತದೊಳಗಿಂದ ಬಿಡುಗಡೆಹೊಂದಲು ಸಾಹಸಪಡುತ್ತಾನೆ. ಹೀಗೆ ಪ್ರತಿಯೊಂದು ವಸ್ತುವೂ ಸ್ವತಂತ್ರವಾಗಲು ಸಾಹಸಪಡುತ್ತದೆ. ವಿಶ್ವದಲ್ಲಿ ತೋರಿಬರುವ ಚಟುವಟಿಕೆಗಳಿಗೆಲ್ಲ ಈ ಸ್ವಾತಂತ್ರ್ಯ ಸಾಹಸವೇ ಮೂಲ ಕಾರಣ. ಈ ಸಾಹಸಬುದ್ಧಿಯಿಂದಲೇ ಸತ್ಪುರುಷರು ಪರಮೇಶ್ವರನ ಭಜನೆಯನ್ನು ಮಾಡುತ್ತಾರೆ. ಕಳ್ಳನು ಕಳವುಮಾಡುವುದಾದರೂ ಈ ಹೇತುವಿನಿಂದಲೇ! ಈ ಹೇತು ಸಾಧನೆಯ ಮಾರ್ಗವು ಅಯೋಗ್ಯವಾಗಿದ್ದರೆ ಅದು ಪಾತಕವೆಂದೂ ಯೋಗ್ಯವಾಗಿದ್ದರೆ ಪುಣ್ಯವೆಂದೂ ಹೇಳುತ್ತಾರೆ. ಆದರೆ ಅವೆಲ್ಲವುಗಳ ಹೇತುವು ಮಾತ್ರ ಒಂದೇ. ಮೋಕ್ಷಪ್ರಾಪ್ತಿಯ ಸಾಹಸ—ಸತ್ಪುರುಷನಿಗೆ ತನ್ನ ಬದ್ಧಾವಸ್ಥೆಯ ತಿಳಿವಳಿಕೆಯಾಗುವುದರಿಂದ ಅವನು ಅದರಿಂದ ಬಿಡುಗಡೆ ಹೊಂದುವುದಕ್ಕಾಗಿಯೇ ಈಶ್ವರನನ್ನು ಆರಾಧಿಸುತ್ತಾನೆ. ಕಳ್ಳನಾದರೂ ತನ್ನಲ್ಲಿ ಕೆಲವು ಪದಾರ್ಥಗಳು ಇಲ್ಲವೆಂದು ವ್ಯಥೆಗೊಳ್ಳುತ್ತಾನೆ. ಈ ಕೊರತೆಯನ್ನು ಹೋಗಲಾಡಿಸಿ ಆ ವ್ಯಥೆಯಿಂದ ಮುಕ್ತನಾಗಲು ಅವನು ಕಳವು

ಮಾಡುತ್ತಾನೆ. ಜಡವಾಗಲಿ, ಚೇತನಾಯುಕ್ತವಾಗಲಿ, ಯಾವ ಪದಾರ್ಥ ವಾದರೂ ಸ್ವಾತಂತ್ರ್ಯಧ್ಯೇಯವುಳ್ಳದ್ದೇ ಇರುತ್ತದೆ. ತಿಳಿದು ಅಥವಾ ತಿಳಿಯದೆ ಪ್ರತಿಯೊಂದು ಪದಾರ್ಥವೂ ಆ ಧ್ಯೇಯದೆಡೆಗೇ ಓಡುತ್ತಲಿದೆ. ಅದು, ಸತ್ಪುರುಷರು ಸಾಧಿಸುವ ಸ್ವಾತಂತ್ರ್ಯದಿಂದ ತೀರ ಭಿನ್ನವಾಗಿರುತ್ತದೆ. ಸತ್ಪುರುಷನ ಪ್ರೀತಿವಿಷಯವಾದ ಸ್ವಾತಂತ್ರ್ಯವು ಅನಿರ್ವಚನೀಯವೂ ಅನಂತವೂ ಆದ ಸುಖಸಾಮ್ರಾಜ್ಯವನ್ನು ಒದಗಿಸಿಕೊಡುತ್ತದೆ. ಕಳ್ಳನು ಮನಸ್ಸಿಟ್ಟ ಸ್ವಾತಂತ್ರ್ಯವು ಜೀವಕ್ಕೆ ಮತ್ತೊಂದು ಹೊಸ ಬಂಧನವನ್ನು ಬಿಗಿಯುತ್ತದೆ.

ಪ್ರತಿಯೊಂದು ಧರ್ಮದಲ್ಲಿ ಈ ಸ್ವಾತಂತ್ರ್ಯಸಂಗ್ರಾಮದ ಆವಿರ್ಭಾವವು ಕಂಡುಬರುತ್ತದೆ. ಯಾವ ಧರ್ಮವಾದರೂ ನೀತಿಯ ಉಗಮವೂ ಸ್ವಾರ್ಥತ್ಯಾಗದ ಮೂಲಾಧಾರವೂ ಆಗಿದೆ. ನಾವೆಂದರೆ ಈ ಚಿಕ್ಕ ದೇಹವೆಂಬ ತಿಳಿವಳಿಕೆಯನ್ನು ಹೊಡೆದೋಡಿಸುವಂತಹದೇ ಸ್ವಾರ್ಥತ್ಯಾಗ. ಯಾರಾದರೂ ಪರರ ಸಹಾಯಕ್ಕಾಗಿ ಸತ್ಕಾರ್ಯವನ್ನು ಮಾಡಲುದ್ಯುಕ್ತರಾದರೆ, ಅವನು 'ತಾನು, ತನ್ನದು' ಎಂಬ ಸಂಕುಚಿತ ದೃಷ್ಟಿಯಿಂದ ಬದ್ಧನಾಗಿಲ್ಲೆಂದು ಹೇಳಬೇಕಾಗುವುದು. ಈ ಸ್ವಾರ್ಥಪರಾಯಣತೆಯಿಂದ ಬಿಡುಗಡೆ ಹೊಂದುವುದು ಇಲ್ಲಿಗೇ ಮುಗಿಯಿತೆಂದಲ್ಲ. ಎಲ್ಲ ಮಹತ್ವದ ನೀತಿಶಾಸ್ತ್ರಗಳೂ ಸಂಪೂರ್ಣ ಸ್ವಾರ್ಥತ್ಯಾಗವೇ ಮನುಷ್ಯನ ಅಂತಿಮ ಸಾಧ್ಯವೆಂದು ಸಾರುತ್ತವೆ. ಈ ಸಂಪೂರ್ಣ ಸ್ವಾರ್ಥತ್ಯಾಗದ ಸೀಮೆಯನ್ನು ಮುಟ್ಟಿದವರ ಸ್ಥಿತಿಯೆಂತಿರುವುದು ? ಅಂಥವನಿಗೆ ಆ ರಾಯ, ಈ ರಾಯನೆಂದು ಅಂಕಿತನಾಮವಿರುವುದಿಲ್ಲ. ಅವನು ವಿಶ್ವವ್ಯಾಪಿಯಾಗಿರುವನೆಂದು ತಿಳಿಯಬೇಕು. ಪೂರ್ವದಲ್ಲಿದ್ದ ಸಂಕುಚಿತ ದೇಹವ್ಯಾಪ್ತಿ ಈಗ ಅವನಿಗೆ ಇಲ್ಲದಂತಾಯಿತು. ಅವನು ಅನಂತನೂ ಅಪಾರನೂ ಆಗಿರುತ್ತಾನೆ. ಈ ಅನಂತ ವಿಶ್ವವ್ಯಾಪ್ತಿಯೇ ಎಲ್ಲ ಧರ್ಮಪಂಥಗಳೂ ನೀತಿಶಾಸ್ತ್ರಗಳೂ ತತ್ವಶಾಸ್ತ್ರಗಳೂ ಬೋಧಿಸುವ ಅಂತಿಮ ಧ್ಯೇಯ. ಶರೀರ ತಾದಾತ್ಮ್ಯವನ್ನು ಹೊಂದಿದ ಸ್ವಾರ್ಥವುಳ್ಳ ಪುರುಷನು ಈ ನಿಸ್ಸೀಮ ಸ್ವಾರ್ಥತ್ಯಾಗಿಯಾದ ಪುರುಷನ ಸ್ಥಿತಿವರ್ಣನೆಯನ್ನು ಕೇಳಿ ದಂಗಾಗಬಹುದು. ಆದರೂ ತಾನೇ ನೀತಿಯ ಉಪದೇಶವನ್ನು ಮಾಡುತ್ತಿರುವಾಗ ತಾನೂ ಇದೇ ವಿಚಾರವನ್ನು ಬೋಧಿಸಿಕೊಳ್ಳುತ್ತಿರುತ್ತಾನೆ. ಮನುಷ್ಯನ

ಸ್ವಾರ್ಥತ್ಯಾಗವು ಇಲ್ಲಿಗೆ ಮುಗಿಯಿತೆಂದು ಅವನು ಗಡಿಕಟ್ಟುವುದಿಲ್ಲ. ಹೀಗೆ ಕೇವಲ ವ್ಯಕ್ತಿಗತ ನೀತಿಶಾಸ್ತ್ರದ ದೃಷ್ಟಿಯಿಂದ ಕೂಡ ಇಂಥ ಒಂದು ಸ್ವಾರ್ಥತ್ಯಾಗವನ್ನು ಮಾಡಿದರೆ ನೀತಿಯ ಚರಮಸೀಮೆಯನ್ನು ಮುಟ್ಟಿ ದಂತಾಯಿತೆನ್ನಲು ಬರುವಂತಿಲ್ಲ. ವಿಶ್ವರೂಪಿಯಾಗುವ ವರೆಗೆ ನಡುವೆ ಎಲ್ಲಿಯೂ ನಿಲ್ಲುವುದು ಶಕ್ಯವೇ ಇಲ್ಲ. ನಾವು ಹೇಳುವುದಾದರೂ ವಿಶ್ವ ರೂಪಿಯಾಗುವುದೇ ಧ್ಯೇಯವೆಂದು. ಈ ಧ್ಯೇಯವನ್ನು ನೀವು ಯಾವ ಮಾರ್ಗದಿಂದ ಸಾಧಿಸಿಕೊಂಡರೂ ಅಷ್ಟೇ. ಸಾಧ್ಯವು ಒಂದಾಗಿರುವಾಗ ಮಾರ್ಗಗಳ ಭಿನ್ನತೆ ಅಷ್ಟು ಮಹತ್ವದ್ದಲ್ಲ. ನಮ್ಮ ವಿಚಾರಕ್ಕೂ ಈ ದೇಹವಾದಿಯ ನೀತಿಮಾರ್ಗಕ್ಕೂ ಇರುವ ಭೇದವೇನು ? ದೇಹ-ವಾದಿ ತನ್ನ ಸ್ವಂತ ಸದಸದ್ವಿವೇಕ ಬುದ್ಧಿಯನ್ನು ಕೂಡ ಕೊನೆಯ ವರೆಗೆ ಅವಲಂಬಿಸಿಕೊಂಡಿರುವ ಧೈರ್ಯವುಳ್ಳವನಲ್ಲ. ತನ್ನ ಬುದ್ಧಿಬಲ ದಿಂದಲೇ ಅಂತಿಮ ಸಾಧ್ಯವನ್ನು ಕಂಡು ತಾನೇ ಭಯಗೊಳ್ಳುತ್ತಾನೆ. ಸರ್ವಸೃಷ್ಟಿಯ ಸಾಹಸೋದ್ಯೋಗಗಳ ಮೂಲಕಾರಣವಾದ ಮುಕ್ತಿಯ ಅಥವಾ ಸ್ವಾತಂತ್ರ್ಯದ ಮಾರ್ಗವನ್ನು ತೋರಿಸುವುದೇ ಕರ್ಮಯೋಗದ ಉದ್ದೇಶ. ಸ್ವಾರ್ಥವನ್ನು ತೊರೆದು ಅನಾಸಕ್ತ ಮನಸ್ಸಿನಿಂದ ಕರ್ಮ ವನ್ನು ಮಾಡಿದರೆ ಮುಕ್ತಿ ದೊರಕುವುದೆಂದು ಕರ್ಮಯೋಗವು ಹೇಳುತ್ತದೆ. ಆದ್ದರಿಂದ ಸ್ವಾರ್ಥಬುದ್ಧಿಪ್ರೇರಿತವಾದ ಕಾರ್ಯವೆಲ್ಲವೂ ಧ್ಯೇಯಸಾಧನೆ ಯನ್ನು ಹಿಂದಕ್ಕೊತ್ತುತ್ತದೆ. ಸ್ವಾರ್ಥರಹಿತವಾದ ಬುದ್ಧಿಪ್ರೇರಿತ ಕರ್ಮವು ಧ್ಯೇಯದೆಡೆಗೆ ನಮ್ಮನ್ನು ಒಯ್ದು ಮುಟ್ಟಿಸುತ್ತದೆ. ಆದ್ದರಿಂದ ನಿತ್ಯನೀತಿ ಗಳ ಸಮರ್ಪಕವಾದ ಒಂದೇ ಒಂದು ವ್ಯಾಖ್ಯೆಯೆಂದರೆ ಇದು : ಸ್ವಾರ್ಥ ಪ್ರೇರಿತ ಕರ್ಮವೆಲ್ಲವೂ ಅನೀತಿವರ್ಧಕ; ಸ್ವಾರ್ಥರಹಿತ ಕರ್ಮವೆಲ್ಲವೂ ನೀತಿವರ್ಧಕ.

ಇಂಥ ಒಂದು ಕರ್ಮವು ಸ್ವಾರ್ಥವೆಂದೂ ಮತ್ತೊಂದು ಸ್ವಾರ್ಥರಹಿತ ವೆಂದೂ ನಿಶ್ಚಯಾತ್ಮಕವಾಗಿ ನಿರ್ಣಯಿಸಿ ಹೇಳುವುದು ಶಕ್ಯವಿಲ್ಲ. ದೇಶ ಕಾಲ ಪರಿಸ್ಥಿತಿಗನುಸರಿಸಿ ವಿಹಿತಕರ್ಮವಾವುದು, ನಿಷಿದ್ಧ ಕರ್ಮವಾವುದು ಎಂಬುದನ್ನು ಅವರವರೇ ನಿರ್ಣಯಿಸಿಕೊಳ್ಳತಕ್ಕದ್ದು. ಅದೇ ಕರ್ಮವು ಒಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಸ್ವಾರ್ಥರಹಿತವೆಂದೂ ಮತ್ತೊಂದು ಪರಿ ಸ್ಥಿತಿಯಲ್ಲಿ ಸ್ವಾರ್ಥಮೂಲವೆಂದೂ ನಿರ್ಣಯಹೊಂದಬಹುದು. ಆದ್ದರಿಂದ

ಕರ್ಮದ ಸರ್ವಸಾಮಾನ್ಯ ವ್ಯಾಖ್ಯೆಯನ್ನು ಮಾತ್ರ ನಾವು ಹೇಳಬಹುದು. ಒಂದು ದೇಶದಲ್ಲಿ ಒಂದು ನಡತೆ ನೀತಿಸಮ್ಮತವೆಂದು ಎಣಿಸಲ್ಪಟ್ಟರೆ ಮತ್ತೊಂದು ದೇಶದಲ್ಲಿ ತೀರ ಭಿನ್ನವಾದ ಪರಿಸ್ಥಿತಿಯಲ್ಲಿ ಅದೇ ನಡತೆ ನೀತಿಬಾಹ್ಯವೆಂದು ಎಣಿಸಲ್ಪಡಬಹುದು. ಸರ್ವ ಸೃಷ್ಟಿಯ ಅಂತಿಮ ಧ್ಯೇಯವು ಸ್ವಾತಂತ್ರ್ಯ. ಈ ಸ್ವಾತಂತ್ರ್ಯವು ದೊರಕುವುದು ಸಂಪೂರ್ಣ ಸ್ವಾರ್ಥತ್ಯಾಗದಿಂದ. ಸ್ವಾರ್ಥರಹಿತವಾದ ಪ್ರತಿಯೊಂದು ವಿಚಾರವೂ ಉಚ್ಚಾರವೂ ಆಚಾರವೂ ಈ ಅಂತಿಮಧ್ಯೇಯದೆಡೆಗೆ ನಮ್ಮನ್ನು ಒಯ್ದು ಮುಟ್ಟಿಸುತ್ತದೆ. ಆದ್ದರಿಂದ ಅದಕ್ಕೆ ನೀತಿಯೆಂದೆನ್ನಬಹುದು. ನೀತಿಯ ಈ ವ್ಯಾಖ್ಯೆಯೇ ಪರಮೇಶ್ವರನ ಆಜ್ಞೆಯ ವಿಷಯವಾಗಿರುವುದೆಂದು ಪ್ರತಿಯೊಂದು ಧರ್ಮದಲ್ಲಿಯೂ ನೀತಿಶಾಸ್ತ್ರದಲ್ಲಿಯೂ ಹೇಳಿದೆ. ಮನುಷ್ಯನು ಇಂಥ ಒಂದು ಕರ್ಮವನ್ನು ಏಕೆ ಮಾಡಬೇಕು, ಇಂಥದನ್ನು ಏಕೆ ಮಾಡಬಾರದು ?—ಎಂಬ ಪ್ರಶ್ನೆಗೆ ದೊರಕುವ ಉತ್ತರ ' ಪರಮೇಶ್ವರನ ಆಜ್ಞೆ ' ಎಂದು. ನೀತಿವಿಷಯಕ ಕಲ್ಪನೆಯ ಉತ್ಪತ್ತಿಯ ಮೂಲಸ್ಥಾನವು ಯಾವುದಿದ್ದರೂ ಅದರ ಬುಡದಲ್ಲಿ ನಿಸ್ವಾರ್ಥತತ್ವವೇ ಹೆಣೆಯಲ್ಪಟ್ಟಿದೆಯೆಂಬುದು ಕಂಡುಬರದೆ ಇರಲಾರದು. ನೀತಿದೃಷ್ಟಿಯಿಂದಲೂ ಧರ್ಮದೃಷ್ಟಿಯಿಂದಲೂ ಈ ಸಿದ್ಧಾಂತದ ಮಹತ್ವವು ಇಷ್ಟು ಸ್ಪಷ್ಟವಾಗಿದ್ದರೂ, ' ಸ್ವಾರ್ಥವನ್ನು ತೊರೆದು ನಿಮ್ಮನ್ನು ನೀವೇ ಮರೆಯಿರಿ ' ಎಂದು ಹೇಳಿದ ಕೂಡಲೆ ಕೆಲವರು ಬೆಚ್ಚಿಬೀಳುತ್ತಾರೆ. ಇದು ಆಶ್ಚರ್ಯವಲ್ಲವೇ ? ಯಾವನೊಬ್ಬನು ಕೇವಲ ತನ್ನ ಸಲುವಾಗಿ ಯಾವ ಮಾತನ್ನೂ ಆಡದಿದ್ದರೆ, ತನ್ನ ಸಲುವಾಗಿ ಯಾವ ಯೋಚನೆಯನ್ನೂ ಮಾಡದಿದ್ದರೆ, ಇಂಥ ಮನುಷ್ಯನಲ್ಲಿ 'ನಾನು, ನನ್ನದು' ಎಂಬ ಸ್ವಾರ್ಥವು ಹೇಗೆ ಕಂಡುಬಂದೀತು ? ಅಷ್ಟೇಕೆ, ' ನೀನು ಯಾರು ?' ಎಂದು ಕೇಳಿದರೆ ಆ ಮನುಷ್ಯನು ಏನು ಉತ್ತರಕೊಡಬಹುದು ? ಸ್ವಾರ್ಥವಿಷಯಕ ಯಾವ ವಿಚಾರವೂ ಅವನಲ್ಲಿ ಉಳಿದಿರುವುದಿಲ್ಲವಾದ್ದರಿಂದ ' ನಾನು, ನನ್ನದು ' ಎಂಬ ಭಾವನೆ ಅವನಲ್ಲಿ ಹುಟ್ಟುವುದೇ ಶಕ್ಯವಿಲ್ಲ. ಯಾರ ಚಿತ್ತದಲ್ಲಿ ಆತ್ಮವಿಷಯಕ ವಿಚಾರವೆಲ್ಲವೂ ಲೋಪ ಹೊಂದಿರುವುದೋ, ಯಾರಲ್ಲಿ ಆತ್ಮವಿಷಯಕ ಭಾವನೆಗಳೆಲ್ಲವೂ ವಿಶ್ವಭಾವಗಳ ಕೂಡ ಏಕರೂಪತೆಯನ್ನು ಹೊಂದಿರುವವೊ ಅಂಥ ಮನುಷ್ಯನ ಚಿತ್ತದೊಳಗಿಂದ ಹಾರಿಹೋದ ' ನಾನು, ನನ್ನದು ' ಎಂಬ ಸ್ವಾರ್ಥಬುದ್ಧಿ ಪುನಃ ಬಂದು

ಸೇರಿಕೊಳ್ಳುವ ಆಸೆ ಉಳಿದಿರುವುದಾದರೂ ಎಲ್ಲಿ ? ಅಹಂಬುದ್ಧಿಯು ಒಮ್ಮೆ ಅನಂತತ್ವದಲ್ಲಿ ಮುಳುಗಿತೆಂದರೆ ಅದು ಅಲ್ಲಿಯೇ ಸ್ಥಿರವಾಗಿ ಉಳಿಯುವುದು.

ಹೀಗೆ ಕರ್ಮಯೋಗದಲ್ಲಿ ನೀತಿತತ್ವಗಳೂ ಧರ್ಮತತ್ವಗಳೂ ಸುಖಕರವಾಗಿ ಒಂದುಗೂಡಿರುತ್ತವೆ. ನಿಸ್ವಾರ್ಥಬುದ್ಧಿಯಿಂದಲೂ ಸತ್ಕರ್ಮಗಳಿಂದಲೂ ಸ್ವಾತಂತ್ರ್ಯವನ್ನು ಸಂಪಾದಿಸಿಕೊಡುವುದೇ ಕರ್ಮಯೋಗದ ಉದ್ದೇಶ. ಕರ್ಮಯೋಗಿಯು ಯಾವ ಮತವನ್ನೂ ನಂಬುವ ಕಾರಣವಿಲ್ಲ, ಯಾವ ಧರ್ಮವನ್ನೂ ಸತ್ಯವೆಂದು ತಿಳಿಯುವ ಬಂಧನವಿಲ್ಲ. ಪರಮೇಶ್ವರನ ಅಸ್ತಿತ್ವದಲ್ಲಿ ಕೂಡ ಅವನು ವಿಶ್ವಾಸವಿಡುವುದು ಬೇಡ. ಆತ್ಮ ಎಂದರೇನು, ಪರಮೇಶ್ವರನೆಂದರಾರು ಇತ್ಯಾದಿ ತತ್ವವಿಚಾರಗಳನ್ನು ಅವನು ಮಾಡುತ್ತ ಕುಳ್ಳಿರುವ ಅಗತ್ಯವಿಲ್ಲ. ಅವನೆದುರಿಗಿರುವುದು ಸಂಪೂರ್ಣ ನಿಸ್ವಾರ್ಥವನ್ನು ಸಂಪಾದಿಸುವ ಗುರಿಯು ಮಾತ್ರ. ಇದನ್ನು ಕರ್ಮಯೋಗಿ ತನ್ನ ಪರಿಶ್ರಮದಿಂದಲೇ ಸಾಧಿಸಿಕೊಳ್ಳಬೇಕು. ಜ್ಞಾನಯೋಗಿಯು ಬುದ್ಧಿಯ ಸಹಾಯದಿಂದಲೂ ಸ್ವಯಂಸ್ಫೂರ್ತಿಯಿಂದಲೂ ಭಕ್ತನು ಪ್ರೇಮದಿಂದಲೂ ಸಾಧಿಸಿಕೊಳ್ಳುವ ಧ್ಯೇಯವನ್ನೇ ಕರ್ಮಯೋಗಿ ಯಾವುದೇ ಮತ, ತತ್ವ ಅಥವಾ ಸಿದ್ಧಾಂತಗಳ ಸಹಾಯವಿಲ್ಲದೆ ಕೇವಲ ಕರ್ಮದಿಂದಲೇ ಸಾಧಿಸಿಕೊಳ್ಳಬೇಕಾಗಿರುವುದರಿಂದ ಅವನ ಆಯುಷ್ಯದ ಪ್ರತಿಯೊಂದು ಕ್ಷಣವೂ ಸಾಧನಮಯವಾಗಿರಬೇಕು. ಇನ್ನು ಮತ್ತೊಂದು ಪ್ರಶ್ನೆಯನ್ನು ಯೋಚಿಸಬೇಕಾಗಿದೆ. ಕರ್ಮವೆಂದರೇನು? ಲೋಕಹಿತಕಾರ್ಯವನ್ನು ಮಾಡುವುದೆಂದರೇನು? ನಾವು ನಿಜವಾಗಿ ಲೋಕಹಿತವನ್ನು ಸಾಧಿಸಬಲ್ಲೆವೇ? ನಿರಪೇಕ್ಷದೃಷ್ಟಿಯಿಂದ– ಪರಮಾರ್ಥದೃಷ್ಟಿಯಿಂದ– ಯೋಚಿಸಿದರೆ, ಜಗತ್ತಿಗೆ ಹಿತವನ್ನು ಮಾಡುವುದು ನಮಗೆ ಶಕ್ಯವಿಲ್ಲವೆಂದೇ ಹೇಳಬೇಕಾಗುವುದು. ಲೌಕಿಕ ದೃಷ್ಟಿಯಿಂದ ಅಥವಾ ಸಾಪೇಕ್ಷದೃಷ್ಟಿಯಿಂದ ಹೇಳುವುದಾದರೆ ಲೋಕಹಿತವನ್ನು ಸಾಧಿಸುವುದು ಸಾಧ್ಯ. ಶಾಶ್ವತವಾಗಿ ಅಥವಾ ಚಿರಸ್ಥಾಯಿಯಾಗುವಂತೆ ಲೋಕಹಿತವನ್ನು ಬಗೆಯುವುದು ಯಾರಿಗೂ ಸಾಧ್ಯವಿಲ್ಲ. ಸಾಧ್ಯವಿದ್ದುದಾಗಿದ್ದರೆ ಜಗತ್ತು ಈ ಸ್ಥಿತಿಯಲ್ಲಿ ಉಳಿಯುತ್ತಿರಲಿಲ್ಲ. ಒಮ್ಮೆ ಒಬ್ಬ ಮನುಷ್ಯನ ಹಸಿವನ್ನು ಹಿಂಗಿಸಿದರೆ ಐದು ನಿಮಿಷಗಳಲ್ಲಿ ಅವನು ಹಸಿವಿನಿಂದ ಪುನಃ ಪೀಡಿತನಾಗುವನು. ನಾವು ಮನುಷ್ಯನಿಗೆ ಒದಗಿಸಬಹುದಾದ ಸುಖಸೌಕರ್ಯ

ಗಳೆಲ್ಲವೂ ಕ್ಷಣಿಕವಾದವುಗಳೆಂದು ಕಂಡುಬರುವುದು. ಸುಖ ದುಃಖಗಳ ತಾಪವು ಪ್ರಪಂಚವನ್ನೇ ಆವರಿಸಿದೆ. ಈ ತಾಪವು ಮೇಲಿಂದ ಮೇಲೆ ಪುನಃ ಪುನಃ ಒದಗತಕ್ಕದ್ದೇ. ಇದನ್ನು ಯಾರೂ ಚಿರವಾಗಿ ಹಿಂಗಿಸಲಾರರು. ಲೋಕಕ್ಕೆ ಶಾಶ್ವತವಾದ ಸುಖವನ್ನು ಒದಗಿಸಿಕೊಡುವುದು ಸಾಧ್ಯವಿದೆಯೇ? ಸಮುದ್ರದಲ್ಲಿ ಒಂದು ಕಡೆ ನಾವು ತೆರೆಯನ್ನು ಮೇಲೆ ಎಬ್ಬಿಸಬೇಕಾದರೆ ಮತ್ತೊಂದು ಕಡೆ ನೀರನ್ನು ಕೆಳಕ್ಕೆ ದಬ್ಬಿ ಹೊಂಡವನ್ನುಂಟುಮಾಡಬೇಕಾಗುವುದು. ಮನುಷ್ಯರ ಆಸೆ ಅಪೇಕ್ಷೆಗಳಲ್ಲಿ ಕೊರತೆಗಳಲ್ಲಿ ಹೆಚ್ಚುಕಡಿಮೆಗಳಾದರೂ ಪ್ರಪಂಚದೊಳಗಿನ ಸದ್ವಸ್ತುಸಂಗ್ರಹವೂ ಸುಖಸಾಮಗ್ರಿಗಳೂ ಒಟ್ಟಿನಲ್ಲಿ ಅಷ್ಟೇ ಉಳಿದಿರುವವು. ಹಿಂದೆ ಇದ್ದ ಸ್ಥಿತಿಗತಿಯೇ ಈಗಲೂ ಉಳಿದುಕೊಂಡಿದೆ. ಸುಖದ ಪರಿಣಾಮವು ಹೆಚ್ಚೂ ಆಗಿಲ್ಲ, ಕಡಿಮೆಯೂ ಆಗಿಲ್ಲ. ಮನುಷ್ಯಪ್ರಾಣಿಯ ಇದುವರೆಗಿನ ಇತಿಹಾಸವನ್ನು ಮಗುಚಿದರೆ, ಅವೇ ಸುಖದುಃಖಗಳೂ ಅವೇ ಚಿಂತೆ ಸಂತೋಷಗಳೂ ಅದೇ ತಾರತಮ್ಯ ಭಾವವೂ ಅದೇ ಭೇದಬುದ್ಧಿಯೂ ಕಂಡುಬರುತ್ತಿರುವವು. ಈಗಲೂ ಕೆಲವರು ಶ್ರೀಮಂತರು ಕೆಲವರು ಬಡವರು, ಕೆಲವರು ದೊಡ್ಡವರು ಕೆಲವರು ಸಾಮಾನ್ಯರು, ಕೆಲವರು ಆರೋಗ್ಯವಂತರು, ಕೆಲವರು ರೋಗಿಗಳು ಇರುವುದಿಲ್ಲವೇ? ಪೂರ್ವಕಾಲದ ಇಜಿಪ್ಟ್, ಗ್ರೀಕ್, ರೋಮ್ ಮೊದಲಾದ ದೇಶಗಳಲ್ಲಿಯೂ ಇದೇ ಸ್ಥಿತಿ ಇತ್ತು. ಪ್ರಾಚೀನೇತಿಹಾಸಕಾಲ ಮೊದಲ್ಗೊಂಡು ಇದು ವರೆಗಿನ ಪ್ರಪಂಚದ ಸ್ಥಿತಿ ಒಂದೇ ಸಮನಾಗಿದೆ. ಆದರೂ ಮಾನವೀ ದುಃಖವನ್ನು ಕಡಿಮೆಮಾಡುವ ಪ್ರಯತ್ನಗಳೂ ಒಂದೇ ಸಮನಾಗಿ ನಡೆದಿವೆ. ಪೂರ್ವಕಾಲದಿಂದಲೂ ಪ್ರತಿಯೊಂದು ಶತಮಾನದಲ್ಲಿ ಪರಹಿತಕ್ಕಾಗಿ ಹೋರಾಡಿದ ಸಾವಿರಾರು ಸ್ತ್ರೀ ಪುರುಷರು ಜನ್ಮವೆತ್ತಿದರು. ಅವರ ಪ್ರಯತ್ನಗಳಿಗೆ ಎಷ್ಟರ ಮಟ್ಟಿಗೆ ಯಶಸ್ಸು ದೊರಕಿದೆ? ಚಂಡು ಇತ್ತಿಂದ ಅತ್ತ ಅತ್ತಿಂದ ಇತ್ತ ಸುತ್ತೂ ಕಡೆಗೆ ಸ್ಥಳದಿಂದ ಸ್ಥಳಕ್ಕೆ ಓಡಾಡುವಂತೆ ಜಗತ್ತಿನೊಳಗಿನ ಸುಖ ದುಃಖಗಳ ಗತಿಯೂ ಇದೆ. ಶಾರೀರಿಕ ಯಾತನೆಗಳನ್ನು ತಗ್ಗಿಸಲು ಯತ್ನಿಸಿದರೆ ಅವೇ ಪ್ರಯತ್ನಗಳಿಂದ ಮಾನಸಿಕ ಯಾತನೆಗಳು ಹೆಚ್ಚಾಗುವವು. ಸರ್ವ ಪ್ರಪಂಚವನ್ನೇ ಸುಖಮಯ ಮಾಡಬೇಕೆಂಬ ಹಂಬಲು ಶಾಲೆಗಳಲ್ಲಿಯ ಎಳೆ ಬಾಲಕರಿಗೆ ಹೇಳಲು ಯೋಗ್ಯವಾದ ಕಟ್ಟುಕಥೆಯಂತೆ ಒಪ್ಪುತ್ತದೆ! ಅದಕ್ಕೂ ಹೆಚ್ಚಿನ

ಯೋಗ್ಯತೆ ಅದಕ್ಕೆ ಇಲ್ಲ. ಸರ್ವ ಜಗತ್ತನ್ನು ಸುಖಮಯ ಮಾಡಬೇಕೆಂದು ಮುಂದರಿದು ಬರುವ ರಾಷ್ಟ್ರಗಳಿಗೆಲ್ಲ ಇದ್ದುದರಲ್ಲಿ ತಮ್ಮ ಪಾಲಿಗೆ ಹೆಚ್ಚಿನ ಸುಖಾಂಶವು ದೊರೆಯಬೇಕೆಂಬ ಅಪೇಕ್ಷೆ. ಅಹಾ! ಎಂಥ ವಿಚಿತ್ರವಾದ ನಿಸ್ವಾರ್ಥವಿದು!

ಪ್ರಪಂಚದೊಳಗಿನ ಸುಖವನ್ನು ಹೆಚ್ಚು ಮಾಡುವುದು ಅಶಕ್ಯ; ದುಃಖ ವನ್ನು ಹೆಚ್ಚು ಮಾಡುವುದೂ ಅಶಕ್ಯ. ಸುಖದುಃಖವನ್ನುಂಟುಮಾಡುವ ಶಕ್ತಿಸಂಗ್ರಹವು ಪ್ರಪಂಚದಲ್ಲಿ ಒಂದೇ ಪರಿಮಾಣದಲ್ಲಿರುವುದು. ಅದು ಇತ್ತಿಂದ ಅತ್ತ ಅತ್ತಿಂದ ಇತ್ತ ನುಗ್ಗಬಹುದು. ಆದರೆ ಒಟ್ಟಿನಲ್ಲಿ ಸಂಗ್ರಹವು ಇದ್ದಷ್ಟೇ ಇರುವುದು. ಇದ್ದಷ್ಟಿರುವುದೇ ಅದರ ಸ್ವಭಾವ. ಈ ಏರಿಳಿತವೂ ಹೆಚ್ಚು ಕಡಿಮೆಯೂ ಈ ಓಟಭರತಿಯೂ ಜಗತ್ತಿನ ಸ್ವಭಾವದ ಪರಿಣಾಮ ವಾಗಿದೆ. ಇದು ಹೀಗೆ ಅಲ್ಲವೆಂದು ಹೇಳುವುದು, ಮರಣವಿಲ್ಲದೆ ಜೀವನವು ಶಕ್ಯವೆಂದು ಹೇಳುವಷ್ಟು ಹಾಸ್ಯಾಸ್ಪದವಾಗಿದೆ. ಇದರಷ್ಟು ಮೂರ್ಖ ತನದ ಮಾತು ಇನ್ನೊಂದಿಲ್ಲ. ಏಕೆಂದರೆ, ಜೀವನದ ಕಲ್ಪನೆಯಲ್ಲಿ ಮರ ಣದ ಕಲ್ಪನೆಯೂ ಸಮಾವಿಷ್ಟವಾಗಿದೆ. ಅದರಂತೆ ಸುಖದ ಕಲ್ಪನೆ ದುಃಖದ ಕಲ್ಪನೆಯನ್ನು ಒಳಗೊಂಡಿದೆ. ದೀಪವು ಸತತವಾಗಿ ಉರಿದು ನಾಶಹೊಂದುತ್ತಿರುತ್ತದೆ. ಈ ಸತತವಾದ ನಾಶ, ಕ್ಷಯ ಅಥವಾ ಮರಣವೇ ಅದರ ಜೀವನ ಕ್ರಮ. ನಾವು ಬದುಕಿಕೊಂಡಿರಬೇಕಾದರೆ ಪ್ರತಿಕ್ಷಣವೂ ನಾವು ಸಾಯಲು ಸಿದ್ಧರಿರಬೇಕು. ಜೀವನ ಮತ್ತು ಮರಣ ಎಂಬಿವು ತಾತ್ವಿಕ ದೃಷ್ಟಿಯಿಂದ ಒಂದೇ ವಸ್ತುವಿನ ಭಿನ್ನ ವ್ಯಕ್ತಸ್ವರೂಪಗಳು. ದೃಷ್ಟಿ ಭೇದದಿಂದ ಹಾಗೆ ಬೇರೆ ಬೇರೆಯಾಗಿ ತೋರುವವು. ಅವು ಒಂದೇ ತೆರೆಯ ಓಟಭರತಿ ಅಥವಾ ಏರಿಳಿತಗಳಂತೆ ಒಬ್ಬನ ಕಣ್ಣಿಗೆ ಬರಿಯ ಏರಿಕೆ ತೋರ ಬಹುದು; ಮತ್ತೊಬ್ಬನ ಕಣ್ಣಿಗೆ ಇಳಿತವು ತೋರಬಹುದು. ಆದರೆ ವಸ್ತುತಃ ಅವೆರಡೂ ಒಂದೇ ತೆರೆಯೆಂಬ ವಸ್ತುವಿನ ಎರಡು ಭಿನ್ನ ಅವಸ್ಥೆ ಗಳು. ಸಾಲೆಗೆ ಹೋಗುವ ವಯಸ್ಸಿನ ಬಾಲಕನ ಎಲ್ಲ ಯೋಗಕ್ಷೇಮ ವನ್ನು ಅವನ ತಾಯಿತಂದೆಗಳು ನೋಡಿಕೊಳ್ಳುತ್ತಿರುವುದರಿಂದ ಅವನಿ ಗಾವ ಚಿಂತೆಯೂ ಇರುವುದಿಲ್ಲ. ಅವನ ಆಶೆ ಆಕಾಂಕ್ಷೆಗಳೂ ಅಲ್ಪಮಟ್ಟ ದವೇ ಇರುತ್ತವೆ. ಅವನು ಸದಾ ಆನಂದಿ, ಆಶಾವಾದಿ. ಆದರೆ ಜಗತ್ತಿನಲ್ಲಿ ಪೆಟ್ಟುತಿಂದು ಹಣ್ಣಾದ ಅನುಭವಿಕ ಮುದುಕ ಮನುಷ್ಯನು ಅಷ್ಟು

ಉತ್ಸಾಹದಿಂದ ಉಬ್ಬಿರುವುದಿಲ್ಲ, ಆ ಹುಡುಗನಷ್ಟು ಆಶೆ ಆಕಾಂಕ್ಷೆಗಳನ್ನೂ ಹೊಂದಿರುವುದಿಲ್ಲ. ಅವನ ಕಾವು ಬಹುಮಟ್ಟಿಗೆ ತಣ್ಣಗಾಗಿರುತ್ತದೆ. ಅದರಂತೆ ಸುತ್ತಲೂ ಕ್ಷಯದ ಲಕ್ಷಣಗಳನ್ನು ಕಾಣುತ್ತಿರುವ ವೃದ್ಧ ರಾಷ್ಟ್ರಗಳು ಹೊಸ ರಾಷ್ಟ್ರಗಳಷ್ಟು ಆಶಾಯುಕ್ತವಾಗಿರುವುದಿಲ್ಲ. ಸಾವಿರ ವರ್ಷ ಕಗ್ಗಾಡಾಗಿದ್ದ ಸ್ಥಳ ಮತ್ತೊಂದು ಸಾವಿರ ವರ್ಷ ನಗರವಾಗಿ ಮೆರೆಯುವುದು. ನಗರವು ಹೋಗಿ ಅರಣ್ಯವೂ ಅರಣ್ಯವು ಹೋಗಿ ಪಟ್ಟಣವೂ ಆಗುವ ರೂಪಾಂತರಕ್ರಿಯೆ ಪ್ರಪಂಚದಲ್ಲಿ ಸತತವಾಗಿ ನಡೆದಿದೆ. ಇದನ್ನು ನೋಡುತ್ತಿರುವ ಜನರು ಅವರವರ ದೃಷ್ಟಿಭೇದದಂತೆ ಸುಖಕ್ಕೂ ದುಃಖಕ್ಕೂ ಭಾಗಿಗಳಾಗುವರು.

ಪ್ರಪಂಚದೊಳಗಿನ ದುಃಖವನ್ನೆಲ್ಲ ಇಲ್ಲದಂತೆ ಮಾಡಲೆಳಸುವ ಜನರ ಮತಗಳಲ್ಲಿ ಒಂದರ ವಿಚಾರವನ್ನು ಮಾತ್ರ ನಾವು ಇದು ವರೆಗೆ ಮಾಡಿದಂತಾಯಿತು. ಈ ಜನರ ಮತ್ತೊಂದು ವಿಚಾರವೆಂದರೆ ಸಮತೆ. ಪ್ರಪಂಚದೊಳಗಿನ ವಿಷಮಾವಸ್ಥೆಯೇ ದುಃಖಕ್ಕೆ ಕಾರಣ. ಅದನ್ನು ಸಂಪೂರ್ಣವಾಗಿ ನಾಶಗೊಳಿಸಿ ಎಲ್ಲೆಲ್ಲಿಯೂ ಸಮತೆಯು ಸ್ಥಾಪಿತವಾಗುವಂತೆ ಮಾಡಿದರೆ ಜನರು ಸುಖಿಗಳಾಗುವರೆಂದು ಈ ಜನರ ಯೋಚನೆ. ಇಡಿಯ ಪ್ರಪಂಚವನ್ನೇ ಸುಖಿಯಾಗಿ ಮಾಡುವ ಇಚ್ಛೆ ಒಂದು ದೃಷ್ಟಿಯಿಂದ ಪ್ರಶಂಸನೀಯವಾದದ್ದೇ ಸರಿ. ಕೇವಲ ಈ ಕಲ್ಪನೆಯಿಂದಲೇ ಪ್ರೇರಿತವಾದ ಅನೇಕ ಕೃತಿಗಳು ನಡೆದಿರುವುದನ್ನು ನಾವು ಕಾಣುತ್ತೇವೆ. ಈ ಕಲ್ಪನೆಯೇ ಇರದಿದ್ದರೆ ಈ ಕೃತಿಗಳೇ ತಲೆಯೆತ್ತುತ್ತಿದ್ದಿಲ್ಲ. ಸರ್ವ ಮಾನವ ಸಮಾಜದಲ್ಲಿಯೂ ಸಮತೆಯನ್ನು ಉಂಟುಮಾಡುವುದು ತಮ್ಮ ಧರ್ಮದ ಒಂದು ವಿಶಿಷ್ಟ ಕಾರ್ಯವೆಂದೇ ಕೆಲವು ಧರ್ಮಗಳ ಉಪದೇಶಕರು ಹೇಳುತ್ತಾರೆ.

ಸ್ವತಃ ಪರಮೇಶ್ವರನೇ ಈ ಪ್ರಪಂಚದಲ್ಲಿ ರಾಜ್ಯಭಾರವನ್ನು ವಹಿಸುವುದಕ್ಕಾಗಿ ಬರುತ್ತಾನೆಂದೂ ಅವನ ಆಳಿಕೆಯಲ್ಲಿ ಭೇದಭಾವಕ್ಕೂ ವಿಷಮಾವಸ್ಥೆಗೂ ಅವಕಾಶವೇ ಸಿಕ್ಕುವುದಿಲ್ಲೆಂದೂ ಈ ಜನರು ಒಳ್ಳೇ ಕಸುವಿನಿಂದ ಪ್ರತಿಪಾದಿಸುತ್ತಾರೆ. ಹೀಗೆ ಪ್ರತಿಪಾದನೆ ಮಾಡುವವರು ನಿಜವಾಗಿ ಧರ್ಮಮೂಢ ಜನರು. ಧರ್ಮಮೂಢರಷ್ಟು ನಿಜವಾದ ಭಾವಿಕ ಜನರು ಯಾರೂ ಇಲ್ಲ. ಗ್ರೀಕ್ ಮತ್ತು ರೋಮನ್ ಜನರ ಆಳಿಕೆಯಲ್ಲಿಯ ಗುಲಾಮರಿಗೆ

ಕ್ರಿಸ್ತ ಧರ್ಮವು ಮನದಟ್ಟಾಗಲು ಇದೇ ಕಾರಣವಾಯಿತು. ಕ್ರಿಸ್ತ ಧರ್ಮದ ಉಪದೇಶದಲ್ಲಿ ಸಮತಾ ತತ್ವದ ವಿಶೇಷವಾದ ಹೊಗಳಿಕೆ ಇದೆ. ಇದರಿಂದ ಪ್ರಪಂಚವೆಲ್ಲ ಕ್ರಿಸ್ತಮಯವಾದರೆ ಎಲ್ಲೆಲ್ಲಿಯೂ ಸಮತೆ ಉಂಟಾಗಿ ಗುಲಾಮಗಿರಿಯು ಬೇರು ಸಹಿತ ಕಿತ್ತುಹೋಗಬಹುದೆಂದು ಆ ಬಡ ಪ್ರಾಣಿಗಳು ತಿಳಿದುಕೊಂಡರು. ತಾವು ಒಮ್ಮೆ ದಾಸ್ಯಶೃಂಖಲೆ ಯಿಂದ ಬಿಡುಗಡೆ ಹೊಂದಿದರೆ ಬೇಕಾದ ಹಾಗೆ ತಿಂದು ಉಂಡು ಆನಂದ ಪಡಬಹುದೆಂದು ಆ ಬಡ ಪ್ರಾಣಿಗಳಿಗೆ ತೋರಿದ್ದರಿಂದ ಅವರು ಕ್ರಿಸ್ತ ಧರ್ಮವನ್ನು ಸ್ವೀಕರಿಸಿದರು. ಈ ತತ್ವವನ್ನು ಉಪದೇಶಿಸಿದ ಉಪ ದೇಶಕನು ಧರ್ಮಾಂಧನಿದ್ದರೂ ನಿಜವಾಗಿ ಬಹಳ ಭಾವಿಕನು. ಪರ ಮೇಶ್ವರನು ಸ್ವತಃ ಈ ಪ್ರಪಂಚದಲ್ಲಿ ಆಳಲು ಬರಬಹುದೆಂಬ ಕಲ್ಪನೆ ನಿಜವೆಂದು ಭಾವಿಸುವಷ್ಟು ಪೆದ್ದನೂ ಭಾವಿಕನೂ ಈ ಕಾಲದಲ್ಲಿ ವಿಶೇಷವಾಗಿ ಸಿಕ್ಕಲಾರನು. ಆದ್ದರಿಂದ ಪೂರ್ವಕಾಲದ ಈ ಸಮತಾ ತತ್ವವು ತುಸು ರೂಪಾಂತರ ಹೊಂದಿದೆ. ಈ ರೂಪಾಂತರದ ಸಮಾನಾರ್ಥಕ ಗಳಾದ ಸ್ವಾತಂತ್ರ್ಯ ಬಂಧುಭಾವ ಎಂಬ ಶಬ್ದಗಳು ಈಗ ಎಲ್ಲೆಲ್ಲಿಯೂ ಕೇಳಬರುತ್ತಲಿವೆ. ವ್ಯಕ್ತಿಸ್ವಾತಂತ್ರ್ಯ, ಮತಸ್ವಾತಂತ್ರ್ಯ ಮೊದಲಾದ ಅನೇಕ ಪ್ರಕಾರದ ಸ್ವಾತಂತ್ರ್ಯಗಳು ದೊರಕಿ ಪರಮೇಶ್ವರನು ಎಲ್ಲರ ತಂದೆ ಯೆಂಬ ಕಲ್ಪನೆ ಒಂದೇ ವೇಳೆಗೆ ಎಲ್ಲರಿಗೂ ಮನದಟ್ಟಾದರೆ ಎಲ್ಲೆಲ್ಲಿಯೂ ಸಮತೆಯುಂಟಾಗಿ ಪ್ರಪಂಚವೇ ಸುಖಿಯಾಗುವುದೆಂಬ ಕೂಗು ಈಗ ಕೇಳ ಬರುತ್ತಲಿದೆ. ಆದರೆ ಇದೂ ಮತ್ತೊಂದು ತರದ ಹುಚ್ಚೇ ಸರಿ. ಮೊದಲಿನ ಧರ್ಮಾಂಧರ ಸ್ಥಳದಲ್ಲಿ ಈ ಹೊಸ ಹುಚ್ಚು ಬಂದಂತೆ ಮಾತ್ರ ಆಯಿತು. ನಿಜವಾದ ಸಮತೆ ಹಿಂದೆ ಈ ಪ್ರಪಂಚದಲ್ಲಿ ಎಂದೂ ಇದ್ದಿಲ್ಲ, ಈಗಲೂ ಇಲ್ಲ, ಮುಂದೆಯೂ ಇರಲಾರದು. ಎಲ್ಲರ ಸ್ಥಿತಿ ಒಂದೇ ಸಮನಾಗಿರು ವುದು ಶಕ್ಯವಿದೆಯೇ ? ಅರಸನಿಗೂ ಆಳಿಗೂ ಸಮಾನವಾದ ಮಾನವು ದೊರೆಯುವ ಸ್ಥಳವೆಂದರೆ ಸ್ಮಶಾನ ! ಎಲ್ಲೆಲ್ಲಿಯೂ ಸಮತೆಯನ್ನು ತರುವು ದಕ್ಕಾಗಿ ಇಡಿಯ ಪ್ರಪಂಚವನ್ನೇ ಸ್ಮಶಾನಭೂಮಿಯನ್ನಾಗಿ ರೂಪಾಂತರ ಗೊಳಿಸಬೇಕಾದೀತು ! ನಮಗೆ ಕಾಣುತ್ತಿರುವ ಪ್ರಪಂಚದ ಸ್ವರೂಪವು ಏಕೆ ಉಂಟಾಯಿತೆಂಬುದನ್ನು ನಾವು ಮೊದಲು ಯೋಚಿಸೋಣ. ಸೃಷ್ಟಿ ಮಾಲಿಕೆಯೊಳಗಿನ ನಮ್ಮ ಈ ಒಂದು ಜಗತ್ತಿನ ಯೋಚನೆ ಮಾಡಿದರೆ,

ಮೊದಲು ಎಂಥರೆ ಪ್ರಳಯಕಾಲದಲ್ಲಿ, ಜಗತ್ತಿನ ಸ್ವರೂಪವು ಈಗಿನಂತೆ ಇದ್ದಿಲ್ಲವೆಂದು ಕಂಡುಬರುವುದು. ಎಲ್ಲ ತತ್ವಗಳೂ ಒಂದು ಮಹಾತತ್ವದಲ್ಲಿ ಲೀನವಾಗಿದ್ದವು; ಮತ್ತು ಜಗತ್ತಿಗೆ ದೃಶ್ಯರೂಪವು ಇದ್ದಿಲ್ಲ. ಅಗ್ನಿಯು ಕಟ್ಟಿಗೆಯಲ್ಲಿ ಅದೃಶ್ಯವಾಗಿರುವಂತೆ ಪ್ರಪಂಚದ ಅವಸ್ಥೆಯೂ ಇತ್ತು. ಜಗತ್ತು ಈ ದೃಶ್ಯರೂಪವನ್ನು ಹೊಂದಲು ಕಾರಣೀಭೂತವಾದ ಸತ್ವ, ರಜ, ತಮ ಎಂಬ ತ್ರಿಗುಣಗಳು ಆಗ ಸಮಾನಾವಸ್ಥೆಯಲ್ಲಿದ್ದವು. ಈ ಸಮಾವಸ್ಥೆಯೇ ಜಗತ್ತಿನ ಲೀನ ಅಥವಾ ಅದೃಶ್ಯಸ್ಥಿತಿ. ಈ ಸಮಾವಸ್ಥೆ ಭಂಗವಾಗಿ ತ್ರಿಗುಣಗಳಲ್ಲಿ ಅಸಮಾನಸ್ಥಿತಿಯುಂಟಾದಾಗ ಜಗತ್ತು ಕಣ್ಣಿಗೆ ಕಾಣುತ್ತದೆ. ಆದ್ದರಿಂದ ಜಗತ್ತು ಕಾಣಿಸಿಕೊಳ್ಳಬೇಕಾದರೆ ಈ ಗುಣಗಳಲ್ಲಿ ಅಸಮಾನಾವಸ್ಥೆಯು ಉತ್ಪನ್ನವಾಗಬೇಕೆಂದು ತಾನೇ ಸಿದ್ಧವಾಗುತ್ತದೆ. ಈ ಗುಣತ್ರಯಗಳಲ್ಲಿ ನಾನು ಮುಂದೆ ತಾನು ಮುಂದೆ ಎಂದು ಹೋರಾಟವೂ, ಮೇಲಾಟವೂ ಮೊದಲಾಗುತ್ತಲೇ ಜಗತ್ತು ದೃಶ್ಯವಾಗುತ್ತದೆ. ಈ ತಾಕಲಾಟದಿಂದ ಸ್ಥಿತಿಯಲ್ಲಿ ಹೆಚ್ಚು ಕಡಿಮೆಗಳು ಅವಶ್ಯವಾಗಿ ಆಗಲೇ ಬೇಕಾಗುವುದು. ಯಾವ ಅಣುರೇಣುಗಳಿಂದ ಈ ಜಗತ್ತು ಕಟ್ಟಲ್ಪಟ್ಟಿದೆಯೋ ಅಂಥ ಅಣುರೇಣುಗಳ ಚಲನವಲನವು ನಿಂತು ಸಮಾನಾವಸ್ಥೆ ಉಂಟಾದರೆ ಏನಾಗುವುದು? ಆಗ ಏನೂ ಉತ್ಪತ್ತಿಯಾಗಲಾರದು. ನಮ್ಮ ಭೌತಿಕ ಶಾಸ್ತ್ರಗಳು ಇದನ್ನು ಸ್ಪಷ್ಟವಾಗಿ ಸಿದ್ಧಮಾಡಿವೆ. ಒಂದು ಪಾತ್ರೆಯಲ್ಲಿ ನಿಶ್ಚಲವಾಗಿರುವ ನೀರನ್ನು ನಾವು ನಮ್ಮ ಕೈಯಿಂದ ಕಲಕಿದರೆ ಆ ನೀರೊಳಗಿನ ಪ್ರತಿಯೊಂದು ಬಿಂದುವೂ ತನ್ನ ಪೂರ್ವದ ಸಮತೆಯ ಪ್ರಾಪ್ತಿಗಾಗಿ ಹೋರಾಡುತ್ತದೆ. ಎಲ್ಲ ಬಿಂದುಗಳೂ ಒಂದು ಮತ್ತೊಂದರ ಸಹಾಯದಿಂದ ಪೂರ್ವಸ್ಥಿತಿಯನ್ನು ದೊರಕಿಸಿಕೊಳ್ಳಲು ಸಾಹಸಪಡುತ್ತಿರುತ್ತವೆ. ಆದರಂತೆ ಜಗತ್ತಿನೊಳಗಿನ ಎಲ್ಲ ಪದಾರ್ಥಗಳೂ ತಮ್ಮ ಪೂರ್ವ ಸಮಾನಾವಸ್ಥೆಯನ್ನು ಹೊಂದಲು ಸಾಹಸಪಡುತ್ತಲಿವೆ. ಈ ಸಮಾನಾವಸ್ಥೆಯು ಉಂಟಾಗುವಷ್ಟರಲ್ಲಿಯೇ ಮತ್ತೊಂದು ಆಘಾತವುಂಟಾಗಿ ಆ ಸಮಾನಾವಸ್ಥೆಯು ಅಲ್ಲಾಡಿಸಲ್ಪಟ್ಟು ಜಗತ್ತು ಪುನಃ ಕಾಣಿಸಿಕೊಳ್ಳುತ್ತದೆ. ಆದ್ದರಿಂದ ಪ್ರಪಂಚದ ಅಸಮಾನತೆಯೇ ಈ ದೃಶ್ಯಸ್ವರೂಪದ ಆದಿಕಾರಣವೆಂದು ಸಿದ್ಧವಾಗುತ್ತದೆ.

ಎಲ್ಲ ಕಡೆಯೂ ಗುಣತ್ರಯಗಳ ಸಮತೆಯುಂಟಾಗದಿದ್ದರೆ ಜಗತ್ತಿನಲ್ಲಿ

ಸಮಾನತೆಯುಂಟಾಗುವುದು ತೀರ ಅಶಕ್ಯವೆಂದು ಸಿದ್ಧವಾಗುತ್ತದೆ. ಗುಣ ತ್ರಯಗಳ ಸಮಾವಸ್ಥೆಯಾಗತೊಡಗಿದರೆ ಆ ವೇಳೆಯಲ್ಲಿ ಜಗತ್ತಿನಲ್ಲಿ ಈಗಿ ರುವ ಎಲ್ಲ ಪದಾರ್ಥಗಳೂ ಬೇರೆ ಸ್ಥಿತಿಯನ್ನು ಹೊಂದುತ್ತವೆ. ನೀರು ಉಂಟಾಗಲಿಕ್ಕೆ ಕಾರಣವಾದ ಎರಡು ವಾಯುಗಳ ಚಲನವಲನವು ನಿಂತರೆ ನೀರಿನ ಅಸ್ತಿತ್ವವೇ ಇಲ್ಲದಂತಾಗುವುದು. ಅದರಂತೆ ಪದಾರ್ಥಗಳು ರೂಪಾಂತರ ಹೊಂದತೊಡಗಿದರೆ ಮನುಷ್ಯರಾದ ನಮಗೆ ಜೀವಧಾರ ಣೆಯು ಶಕ್ಯವಿದೆಯೆ? ಪದಾರ್ಥಗಳಲ್ಲಿ ಸಮತೆಯುಂಟಾದ ಕೂಡಲೆ ನಾವು ವಾಸಿಸುವುದಕ್ಕೆ ಈ ಪ್ರಪಂಚವು ಅಯೋಗ್ಯವಾಗುವುದು, ಮತ್ತು ಜಗತ್ತೊಂದು ದೊಡ್ಡ ಮಸಣಗಟ್ಟೆಯಾಗುವುದು! ಸ್ಮಶಾನದಲ್ಲಿ ಮಾತ್ರ ನಿಜವಾದ ಸಮತೆಯಿರುವುದೆಂದು ನಾವು ದಿನವೂ ನೋಡುತ್ತೇವೆ. ಇದ ನ್ನೆಲ್ಲ ಯೋಚಿಸಿ ನೋಡಿದರೆ ಸರ್ವತ್ರ ಸಮತೆಯನ್ನು ಮತ್ತು ಬಂಧುಭಾವ ವನ್ನುಂಟುಮಾಡಲು ಯತ್ನಿಸುವುದು ಎಂಥ ಹುಡುಗಾಟಿಕೆಯೆಂಬುದು ನಮ್ಮ ಗಮನಕ್ಕೆ ಬರುವುದು. ಈ ಪ್ರಯತ್ನವು ಕೇವಲ ಹುಡುಗಾಟವಷ್ಟೆ ಅಲ್ಲ, ಅದನ್ನು ಫಲದ್ರೂಪ ಮಾಡುವ ಪ್ರಯತ್ನದಲ್ಲಿ ನಮಗೆ ಯಶಸ್ಸು ಸಿಕ್ಕಿದ್ದೇ ಆದರೆ ಅದೇ ದಿನವೆ ಪ್ರಳಯಕಾಲಕ್ಕೆ ಮೊದಲಾಯಿತೆಂದು ತಿಳಿಯಬೇಕು! ಮನುಷ್ಯ ಮನುಷ್ಯರಲ್ಲಿ ಕಾಣಬರುವ ಭೇದಭಾವಕ್ಕೆ ಕಾರಣವೇನು? ಇಬ್ಬರು ಮನುಷ್ಯರ ಮೆದುಳಿನಲ್ಲಿರುವ ಅಂತರವೇ ಅವರ ಮುಂದಿನ ಅವಸ್ಥೆಯಲ್ಲಿ ಅಸಮಾನತೆಯನ್ನು ಉಂಟುಮಾಡುತ್ತದೆಂದು ಹೇಳುವುದು ಯೋಗ್ಯವಲ್ಲ. ಒಂದೇ ದಿನ ಹುಟ್ಟಿದ ನಾಲ್ಕು ಹುಡುಗರನ್ನು ಪರೀಕ್ಷಿಸಿದರೂ ಅವರ ಮೆದುಳಿನಲ್ಲಿ ಭೇದವಿದ್ದೇ ಇರುತ್ತದೆಂದು ಶಾಸ್ತ್ರ ಜ್ಞರು ಹೇಳುತ್ತಾರೆ. ಎಲ್ಲರ ಮೆದುಳುಗಳಲ್ಲಿ ಒಂದೇ ಸಮನಾಗಿ ಶಕ್ತಿಯಿರು ವುದೆಂದು ಹುಚ್ಚರ ಹೊರತು ಯಾರೂ ಈ ಕಾಲದಲ್ಲಿಯಂತೂ ಹೇಳ ಲಾರರು. ನಾವು ಯಾವ ಶಸ್ತ್ರಗಳಿಂದ ಸಿದ್ಧರಾಗಿ ಈ ಪ್ರಪಂಚಕ್ಕೆ ಇಳಿದು ಬರುತ್ತೇವೋ ಆ ಶಸ್ತ್ರಾಸ್ತ್ರಗಳಲ್ಲಿಯೇ ಭೇದವು ಕಂಡುಬರುವುದು. ಈ ಭೇದವು ಗರ್ಭಾವಸ್ಥೆಯಲ್ಲಿಯೇ ಉತ್ಪನ್ನವಾಗಿರುತ್ತದೆ. ಗರ್ಭದಿಂದ ಹೊರಗೆ ಬಿದ್ದು ಪ್ರಪಂಚದಲ್ಲಿ ತಿರುಗಾಡತೊಡಗಿದೆವೆಂದರೆ ಬುದ್ಧಿಯ ಈ ಹೆಚ್ಚುಕಡಿಮೆಗಳು ಕಾಣಿಸಿಕೊಳ್ಳುವವು. ಬುದ್ಧಿಬುದ್ಧಿಗಳಲ್ಲಿ ಕಂಡು ಬರುವ ಹೆಚ್ಚುಕಡಿಮೆಯನ್ನು ಇಲ್ಲದಂತೆ ಮಾಡುವುದು ಶಕ್ಯವಿದೆಯೋ?

ನಿಮ್ಮ ಈ ದೇಶದ (ಅಮೇರಿಕೆ) ಮೂಲನಿವಾಸಿಗಳಾದ ಇಂಡಿಯನ್ ಜನರು ಸಾವಿರಾರು ವರ್ಷಗಳಿಂದ ಇರುತ್ತಿದ್ದರು. ಆ ಮೇಲೆ ನಿಮ್ಮ ನಾಲ್ಕು ಜನ ಪೂರ್ವಜರು ಇಲ್ಲಿಗೆ ಬಂದರು. ಆ ಕಾಲದ ಸ್ಥಿತಿಯನ್ನು ಕಂಡ ಒಬ್ಬ ಮನುಷ್ಯನು ಈಗ ಇಲ್ಲಿ ಬಂದರೆ ಈ ನಡುವೆ ಆದ ಸ್ಥಿತ್ಯಂತರವನ್ನು ಕಂಡು ಬೆರಗಾಗುವಂತಿದೆ. ಇದು ತನ್ನ ಪೂರ್ವದ ದೇಶವೆಂದು ಅವನಿಗೆ ನಿಜವಾಗಿ ತೋರುವುದಿಲ್ಲ. ಅಮೇರಿಕೆಯ ಇಂಡಿಯನ್ ಜನರು ಸಾವಿರಾರು ವರ್ಷಗಳಿಂದ ಈ ದೇಶದಲ್ಲಿರುತ್ತಿದ್ದರೂ ಒಂದಾದರೂ ಪಟ್ಟಣವನ್ನು ನಿರ್ಮಾಣ ಮಾಡಿದ್ದರೋ? ಒಂದಾದರೂ ಕಾರಖಾನೆಯನ್ನು ಆರಂಭಿಸಿದ್ದರೋ? ಅವರೇಕೆ ಇವುಗಳನ್ನು ಮಾಡಲಿಲ್ಲ? ಜನ್ಮತಃ ಎಲ್ಲರ ಬುದ್ಧಿಪ್ರಮಾಣವು ಒಂದೇ ಸಮನಾಗಿದ್ದರೆ, ನಿಮ್ಮ ಅಲ್ಪಸಂಖ್ಯಾಕರಾದ ಪೂರ್ವಜರು ಅಲ್ಪಾವಧಿಯಲ್ಲಿಯೇ ಮಾಡಿತೋರಿಸಿದ ಕಾರ್ಯಗಳನ್ನು ಸಾವಿರಾರು ವರ್ಷಗಳಿಂದ ಇಲ್ಲಿಯೇ ವಾಸಮಾಡುತ್ತಿರುವ ಸಾವಿರಾರು ಇಂಡಿಯನ್ ಜನರು ಏಕೆ ಮಾಡಲಿಲ್ಲ? ನಿಮ್ಮ ಪೂರ್ವಜರ ಸಂಗಡ ಈ ದೇಶಕ್ಕೆ ಬಂದ ಬುದ್ಧಿಶಕ್ತಿ ಬೇರೆ ತರದ್ದಿತ್ತು. ಅವರ ಬೇರೆ ತರದ ಪೂರ್ವಸಂಸ್ಕಾರಗಳು ಅವರ ಜೊತೆಯಲ್ಲಿ ಬಂದಿದ್ದವು. ಇಲ್ಲಿ ಅವುಗಳಿಗೆ ಅನುಕೂಲ ಭೂಮಿಕೆ ಸಿಕ್ಕ ಕೂಡಲೆ ಆ ಸಂಸ್ಕಾರಗಳಿಗೆ ದೃಶ್ಯ-ರೂಪವುಂಟಾಗಿ ಗುಡಿಸಲು ಹೋಗಿ ಇಂದ್ರಭವನವೂ ವನವು ಹೋಗಿ ಉಪವನವೂ ಉಂಟಾದವು. ಸರ್ವತ್ರ ಸಮತಾವಸ್ಥೆಯೆಂದರೆ ಅದೊಂದು ಮೃತ್ಯುವಿನ ಸಾಮ್ರಾಜ್ಯವೇ ಸರಿ! ಜಗತ್ತು ಈಗಿನಂತೆ ಇರುವ ವರೆಗೆ ಅದರ ವಿಷಮಾವಸ್ಥೆ ಎಂದೂ ಇಲ್ಲದಂತಾಗಲಾರದು. ಸರ್ವತ್ರ ಸಮತೆಯನ್ನು ಉಂಟುಮಾಡಿ ಸರ್ವ ಜಗತ್ತನ್ನೂ ಸುಖಿಯಾಗಿ ಮಾಡುವ ನಮ್ಮ ಪ್ರಯತ್ನವು ಪ್ರಳಯಕಾಲದಲ್ಲಿ ಮಾತ್ರ ಸಿದ್ಧಿಸಬಹುದು! ಈ ಸಮಾವಸ್ಥೆ ಪ್ರಳಯಕಾಲದ ಹೊರತು ಮತ್ತಾವ ಕಾಲದಲ್ಲಿಯೂ ಶಕ್ಯವಿಲ್ಲ. ಹೀಗಿದ್ದರೂ ಈ ಕಲ್ಪನೆಯಿಂದ ಪ್ರೇರಿತವಾದಂಥ ಅನೇಕ ಮಹತ್ವದ ಉದ್ಯೋಗಗಳು ನಡೆದಿರುವವೆಂಬುದನ್ನು ಮರೆಯಲಾಗದು. ಜಗತ್ತು ದೃಶ್ಯ ಸ್ವರೂಪವನ್ನು ಹೊಂದಲು ಅಸಮಾನತೆ ಅವಶ್ಯವಿದ್ದಂತೆ ಆ ಅಸಮತೆಯು ಮೇರೆ ಮೀರಿ ಹೋಗದಂತೆ ಪ್ರಯತ್ನಿಸುವುದೂ ಜಗತ್ತಿನ ಅಸ್ತಿತ್ವಕ್ಕೆ ಅವಶ್ಯವಾಗಿದೆ. ಈ ಮಾರ್ಗದಿಂದ ಪ್ರಯತ್ನಮಾಡಿ ಮನುಷ್ಯನು ತನ್ನ ಮೂಲ ಸಚ್ಚಿದಾನಂದ ಸ್ವರೂಪ

ವನ್ನು ಪುನಃ ಹೊಂದುತ್ತಾನೆ. ತನ್ನ ಮೂಲ ಸ್ವರೂಪವನ್ನು ಹೊಂದ ಬೇಕೆಂಬ ಬಯಕೆ ಉಂಟಾಗಿರದಿದ್ದರೆ ಜಗತ್ತಿಗೆ ದೃಶ್ಯಸ್ವರೂಪವೇ ಪ್ರಾಪ್ತ ವಾಗುತ್ತಿರಲಿಲ್ಲ. ಆದ್ದರಿಂದ ಜಗತ್ತಿಗೆ ದೃಶ್ಯಸ್ವರೂಪವು ಬಂದು ಆ ಸ್ಥಿತಿಯು ಸ್ಥಿರವಾಗಿ ನಿಲ್ಲಬೇಕಾದರೆ ಪೂರ್ವದ ಸ್ವರೂಪಕ್ಕೆ ತಿರುಗಿಹೋಗ ಬೇಕೆಂಬ ಇಚ್ಛೆಯೂ ಅಸಮತೆಯೂ ಅಷ್ಟೇ ಅವಶ್ಯವಾಗಿವೆ. ಅಂತೂ ಜಗತ್ತಿನ ಸ್ಥಿತಿಯನ್ನು ಮಾರ್ಪಡಿಸಲು ಹವಣಿಸುವ ಜನರೂ ಅದನ್ನು ಇದ್ದಂತೆ ಇಡಬಯಸುವ ಜನರೂ ಜಗತ್ತಿಗೆ ಅವಶ್ಯವಾಗಿ ಬೇಕು. ಇವೆರಡ ರಲ್ಲಿ ಯಾವ ಇಚ್ಛೆಯು ಅಂತಃಕರಣದಲ್ಲಿ ಪ್ರಬಲವಾಗಿರುವುದೋ ಅದಕ್ಕ ನುಸರಿಸಿ ಹೇತುವುಂಟಾಗುವುದು. ಈ ಹೇತುವಿಗನುಸರಿಸಿ ಮನುಷ್ಯನು ಕರ್ಮದಲ್ಲಿ ಪ್ರವೃತ್ತನಾಗುತ್ತಾನೆ. ಜಗತ್ತು ಅಸ್ತಿತ್ವದಲ್ಲಿರುವ ವರೆಗೆ ಈ ಎರಡೂ ತರದ ಜನರು ಇರತಕ್ಕವರೇ. ಈ ಎರಡೂ ತರದ ಜನರು ಇರುವ ವರೆಗೆ ಜಗತ್ತು ಅಸ್ತಿತ್ವದಲ್ಲಿರತಕ್ಕದ್ದೇ. ಹೀಗೆ ಪರಸ್ಪರ ಸಂಬಂಧ ವಿದೆ.

ಪ್ರಚಂಡವಾದ ಈ ಸಂಸಾರಚಕ್ರದ ಗರ್ಭದಲ್ಲಿ ಅನೇಕ ಚಕ್ರಗಳು ತುಂಬಿಕೊಂಡಿವೆ. ನಮ್ಮ ಕೈ ಒಮ್ಮೆ ಅದರಲ್ಲಿ ಸಿಲುಕಿಕೊಂಡಿತೆಂದರೆ ಈ ಚಕ್ರವು ನಮ್ಮನ್ನು ಒಳಗೆಳೆದುಕೊಂಡು ಹಿಂಡಿ ಹಿಪ್ಪೆಮಾಡುವು ದೆಂಬುದು ನಿಸ್ಸಂದೇಹದ ಮಾತು. ನಾವು ಒಂದು ಕರ್ಮದಲ್ಲಿ ತೊಡಗಿ ಕೊಂಡಾಗ, ಆ ಕರ್ಮವು ಮುಗಿದ ಕೂಡಲೇ ನಮಗೆ ವಿಶ್ರಾಂತಿ ದೊರೆ ಯುವುದೆಂದು ತಿಳಿಯುತ್ತೇವೆ. ಆದರೆ ಆ ಕರ್ಮವು ಇನ್ನೂ ಅರ್ಧಮರ್ಧ ಮುಗಿಯುವಷ್ಟರಲ್ಲಿಯೇ ಮತ್ತೊಂದು ಕರ್ಮವು ಎದುರಿಗೆ ಬಂದು ನಿಲ್ಲುತ್ತದೆ. ಈಗ ನಾವೆಲ್ಲರೂ ಈ ಪ್ರಚಂಡ ಚಕ್ರದ ಸೆಳವಿನಲ್ಲಿ ಸಿಲುಕಿ ಕೊಂಡಿದ್ದೇವೆ. ಇದರಿಂದ ಪಾರಾಗಲು ಎರಡು ಮಾರ್ಗಗಳಿವೆ. ನಮಗೆ ಯಾವ ರೀತಿಯಿಂದಲೂ ಈ ಚಕ್ರದ ಸಂಬಂಧವು ತಗಲದಂತೆ ಎಚ್ಚರ ಪಡಬೇಕು. ಆದ್ದರಿಂದ ಎಲ್ಲ ವಾಸನೆಗಳನ್ನು ಒಂದು ಕ್ಷಣದಲ್ಲಿಯೇ ತ್ಯಜಿಸಬೇಕು. ಇದೇ ಮೊದಲನೆಯ ಮಾರ್ಗ. ಇದನ್ನು ಹೇಳುವುದು ಸುಲಭವಿದ್ದರೂ ಆಚರಿಸುವುದು ಅಶಕ್ಯವೆಂದೇ ಹೇಳಬಹುದು. ಕೋಟ್ಯ ವಧಿ ಜನರಲ್ಲಿ ಒಬ್ಬನು ಮಾತ್ರ ಹೀಗೆ ಆಚರಿಸಿ ತೋರಿಸಬಹುದು. ಎರಡ ನೆಯ ಮಾರ್ಗವೆಂದರೆ, ಈ ಚಕ್ರದ ಭಯಂಕರ ಸ್ವರೂಪಕ್ಕೆ ಹೆದರದೆ,

ಒಮ್ಮೆಲೇ ಅದರಲ್ಲಿ ಹಾರಿಕೊಂಡು ಅದು ಹೇಗೆ ತಿರುಗುತ್ತದೆ, ಏತರ ಬಲದಿಂದ ತಿರುಗುತ್ತದೆ, ಬೇಕಾದಾಗ ಅದರೊಳಗಿಂದ ಪಾರಾಗಿ ಬರಲಿಕ್ಕೆ ಮಾರ್ಗವೆಲ್ಲಿದೆ ಇತ್ಯಾದಿ ರಹಸ್ಯಗಳನ್ನು ಹುಡುಕಿ ತೆಗೆಯುವುದು. ಈ ರಹಸ್ಯಗಳನ್ನು ಗೊತ್ತುಪಡಿಸಿಕೊಂಡ ಕೂಡಲೇ, ನಾವು ಈ ಚಕ್ರದ ಅಧಿಪತಿಗಳಾಗುವೆವು. ಈ ರಹಸ್ಯವನ್ನು ಸ್ವಾಧೀನಪಡಿಸಿಕೊಳ್ಳುವುದೇ ಕರ್ಮಯೋಗದ ಉದ್ದೇಶ. ಆದ್ದರಿಂದ ಒಳ್ಳೇ ಎದೆಗಾರಿಕೆಯಿಂದ ಮುಂದುವರಿದು ಒಮ್ಮೆಲೇ ಒಳಹೊಕ್ಕು ಕೋಟೆಯನ್ನು ವಶಪಡಿಸಿಕೊಂಡರೆ ನಿಮ್ಮ ಕಾರ್ಯವಾಯಿತು. ಈ ಚಕ್ರವ್ಯೂಹಕ್ಕೆ ಹೆದರಿ ಓಡಿಹೋಗಬೇಡಿರಿ. ಓಡಿಹೋಗುವುದರಿಂದ ಕಾಪಾಡಿಕೊಳ್ಳುವುದು ಶಕ್ಯವಿಲ್ಲ. ಈ ಕೆಲಸಕ್ಕೆ ಒಳ್ಳೇ ಚತುರತೆಯಿಂದ ಕೈಯಿಕ್ಕಬೇಕು. ಒಳಗೆ ಹೊಕ್ಕು ಯೋಗ್ಯ ಮಾರ್ಗದಿಂದ ನಡೆದರೆ, ಸುರಕ್ಷಿತವಾಗಿ ಹೊರಬೀಳುವ ಮಾರ್ಗವೂ ತನ್ನಾರೆ ತಾನೇ ಕಾಣಬರುವುದು.

ಕರ್ಮವೆಂದರೇನೆಂಬುದನ್ನು ನಾವು ಹಿಂದೆ ಆಲೋಚಿಸಿದ್ದೇವೆ. ಪ್ರಪಂಚದ ಅಸ್ತಿತ್ವವೇ ಕರ್ಮವನ್ನು ಹೊಂದಿಕೊಂಡಿದೆಯೆಂದೂ ನಾವು ತಿಳಿದುಕೊಂಡಿದ್ದೇವೆ. ಅದರಂತೆ ಇಡೀ ಪ್ರಪಂಚವನ್ನೇ ಸುಖಿಯಾಗಿ ಮಾಡಲು ಯತ್ನಿಸುವುದು ಮೂರ್ಖತನ, ಸರ್ವಥಾ ಅಶಕ್ಯ ಎಂಬುದನ್ನೂ ನಾವು ಆಗಲೇ ಅರಿತುಕೊಂಡಿದ್ದೇವೆ. ಈಶ್ವರನ ಅಸ್ತಿತ್ವದಲ್ಲಿ ಅಂತಃಕರಣಪೂರ್ವಕವಾಗಿ ವಿಶ್ವಾಸವನ್ನಿಟ್ಟವರಿಗೆ ಇದು ಬೇಗನೆ ತಿಳಿಯುವುದು. ಪರಮೇಶ್ವರನು ನಮ್ಮ ನೆರವನ್ನು ಬಯಸುವಷ್ಟು ದುರ್ಬಲನಲ್ಲವೆಂಬುದನ್ನು ಅವನೆಂದೂ ಮರೆಯುವುದಿಲ್ಲ. ಜಗತ್ತು ಇದು ವರೆಗೆ ನಡೆದಿರುವಂತೆ ಮುಂದೂ ನಡೆಯತಕ್ಕದ್ದೇ. ಮುಕ್ತಿಯನ್ನು ಪಡೆಯುವುದೇ ನಮ್ಮ ಕೆಲಸ. ಅತ್ಯಂತ ನಿಸ್ವಾರ್ಥಿಯಾಗುವುದೇ ಮುಕ್ತಿಯ ಮಾರ್ಗ. ಕರ್ಮ ಮಾಡುತ್ತಲೇ ನಿಸ್ವಾರ್ಥಿಯಾಗುವುದಕ್ಕೇ ಮತ್ತು ನಿಸ್ವಾರ್ಥಿಯಾಗಿ ಮುಕ್ತಿಯನ್ನು ಹೊಂದುವುದಕ್ಕೇ ಕರ್ಮಯೋಗವೆನ್ನುವರು. ಜಗತ್ತನ್ನು ಸುಖಿಯಾಗಿ ಮಾಡುವ ಕಲ್ಪನೆಯು ಧರ್ಮಮೂಢ ಜನರನ್ನು ಕಾರ್ಯರತರನ್ನಾಗಿಡಲು ತಕ್ಕದ್ದೆಂಬುದು ನಿಜ. ಆದರೆ ಧರ್ಮಮೂಢ ಜನರಿಂದ ಕೆಲವು ಒಳ್ಳೇ ಕಾರ್ಯಗಳು ಆಗುವಂತೆ, ಅನೇಕ ಅಹಿತಕರ ಭಾವನೆಗಳೂ ನಿರ್ಮಾಣವಾಗುತ್ತವೆ. ತಾನು ಮುಕ್ತಿಯನ್ನು ಹೊಂದಬೇಕೆಂಬ ಹಂಬಲು

ಪ್ರತಿಯೊಂದು ವಸ್ತುವಿಗೂ ಇದೆ. ವಸ್ತುಗಳೆಲ್ಲಾ ಅದಕ್ಕನುಸರಿಸಿಯೇ ಪ್ರಯತ್ನ ಮಾಡುತ್ತಿರುತ್ತವೆ. ಈ ಹಂಬಲು ಬಲವತ್ತರವಾಗಿರುವುದರಿಂದ, ಅದು ನಿಮ್ಮನ್ನು ಸುಮ್ಮನೆ ಇರಗೊಡುವುದಿಲ್ಲ. ಹಾಗಾದರೆ, ಕರ್ಮದಲ್ಲಿ ಪ್ರವೃತ್ತಿಯನ್ನುಂಟುಮಾಡಲು ಹೊರಗಿನ ಒಂದು ಶಕ್ತಿಯನ್ನೇಕೆ ಅಪೇಕ್ಷಿಸ ಬೇಕೆಂಬುದನ್ನು ಕರ್ಮಯೋಗವು ಹೇಳುತ್ತದೆ. ಇಂಥ ಒಂದು ಕರ್ಮ ವನ್ನು ಮಾಡಿದರೆ ಇಂಥ ಫಲವು ಸಿಗುವುದೆಂಬ ತಾರ್ಕಿಕ ವಿಚಾರವನ್ನು ಕಿತ್ತೊಗೆದು ಫಲಾಸಕ್ತಿಯನ್ನು ಬಿಟ್ಟು ಕರ್ಮ ಮಾಡಿರಿ. ಸತತಾಭ್ಯಾಸ ದಿಂದ ಇದೆಲ್ಲ ಕೈಗೂಡುವಂತಿದೆಯೆಂದು ಕರ್ಮಯೋಗವು ಹೇಳುತ್ತದೆ. ಇಂದ್ರಿಯಜನ್ಯ ಸುಖಕ್ಕಾಗಿ ಕರ್ಮವನ್ನು ಮಾಡಬಾರದೆಂಬ ಬುದ್ಧಿಯಿಂದ ಕರ್ಮ ಮಾಡುವ ಅಭ್ಯಾಸವನ್ನು ಮಾಡತೊಡಗಿದರೆ ಸ್ವಾರ್ಥವು ಸಮೂಲ ವಾಗಿ ನಾಶವಾಗುವುದು. ಆಗ ಪರಾರ್ಥವೇ ಜೀವಿತದ ಒಂದು ಧ್ಯೇಯ ವಾಗುವುದು. ನಮ್ಮಿಂದ ಪರಾರ್ಥವು ಆಗದಂತಿದ್ದರೆ ಪ್ರಪಂಚದಲ್ಲಿ ಜೀವಿಸುವುದು ಕೂಡ ಯೋಗ್ಯವಲ್ಲೆಂಬ ಉತ್ಕಟಭಾವನೆ ಉತ್ಪನ್ನವಾಗು ವುದು. ವಸ್ತುಸ್ಥಿತಿಯು ಹೀಗಿರುತ್ತಿರಲು, ನಮ್ಮನ್ನು ಕಾರ್ಯರತರನ್ನಾಗಿ ಮಾಡಲು ಬೇಕಾದ ಚಾಲನಶಕ್ತಿ ಹೊರಗಿನಿಂದ ಬರಬೇಕಾದ ಅಪೇಕ್ಷೆ ಯೇಕೆ? ಇಂಥ ಒಂದು ಕಾರ್ಯವು ಚನ್ನಾಗಿರುವುದೆಂದು ನಮಗೆ ತೋರಿ ದರೆ ಅದನ್ನು ಮಾಡಲು ಯಾವಾಗಲೂ ಸಜ್ಜಾಗಿರಬೇಕು. ಅದರಲ್ಲಿ ನಮ್ಮ ಸ್ವಂತ ಸುಖದ ಅಪೇಕ್ಷೆಯೇನೂ ಇರಬಾರದು. ಇಹಲೌಕಿಕ ಸುಖದ ಅಪೇಕ್ಷೆಯಂತೂ ಇರಲೇ ಕೂಡದು. ಸ್ವರ್ಗಸುಖದ ಅಪೇಕ್ಷೆಯಿಂದ ಮಾಡಿದ ಸತ್ಕರ್ಮಗಳು ಕೂಡ ನಮಗೆ ಬಾಧಕವಾಗುತ್ತವೆ. ಲವಲೇಶ ವಾದರೂ ಸ್ವಾರ್ಥವಿರುವ ವರೆಗೆ ಮಾಡಿದ ಪ್ರತಿಯೊಂದು ಕರ್ಮವೂ ಮುಕ್ತಿಮಾರ್ಗದಿಂದ ನಮ್ಮನ್ನು ದೂರ ದೂಡುತ್ತದೆ. ಇಷ್ಟೇ ಅಲ್ಲ, ನಮ್ಮ ಮೈಯ ಸುತ್ತಲೂ ಮೊದಲೇ ಇರುವ ಬಂಧನಗಳಿಗೆ ಆ ಕರ್ಮದ ಯೋಗದಿಂದ ಮತ್ತೊಂದು ಹೊಸ ಕಟ್ಟು ಬಿಗಿದಂತಾಗುವುದು.

ಆದ್ದರಿಂದ ಕರ್ಮಯೋಗವು ಬೇಸರಿಯದೆ ಮೇಲಿಂದ ಮೇಲೆ ಗಟ್ಟಿ ಯಾಗಿ ಹೇಳುವ ಮಾತೆಂದರೆ ಇದೇ: ಪ್ರತಿಯೊಬ್ಬನು ಫಲಾಸಕ್ತಿಯಿಂದ ಕರ್ಮವನ್ನು ಮಾಡಬಾರದು. ನಮಗಾಗಿ ಜಗತ್ತು ಹುಟ್ಟಿಲ್ಲ; ಜಗತ್ತಿ ಗಾಗಿ ನಾವು ಹುಟ್ಟಿಲ್ಲ. ಯಾರೂ ಯಾರಿಗೂ ಕೆಡುಕನ್ನಾಗಲಿ ಒಳಿತನ್ನಾ

ಗಲಿ ಮಾಡಲಾರರು. ಅದರಂತೆ ಹೊರಗಿನ ಶರೀರದಲ್ಲಿ ಕಂಡುಬರುವ ಸ್ವರೂಪವು ನಮ್ಮದಲ್ಲ. ಅನೇಕ ಕರ್ಮಗಳನ್ನು ಮಾಡಿ ಅವುಗಳ ಫಲ ಗಳನ್ನು ಉಣ್ಣುವಂತೆ ನಾವು ಕಂಡರೂ, ಅದು ನಮ್ಮ ನಿಜವಾದ ಮೂಲ ಸ್ವರೂಪವಲ್ಲ. ಸಚ್ಚಿದಾನಂದರೂಪವೇ ನಮ್ಮ ನಿಜವಾದ ರೂಪ. ಕರ್ಮ ವನ್ನು ಮಾಡುವಂತೆ ಕಂಡರೂ ನಾವು ನಿಜವಾಗಿ ಏನೂ ಮಾಡುವು ದಿಲ್ಲ. ಹೀಗಿದ್ದರೆ ನಾವು ಬಂಧನವನ್ನು ಏಕೆ ಅನುಭೋಗಿಸುತ್ತಿ ದ್ದೇವೆ? ಈ ಬಂಧನದಿಂದ ಬಿಡುಗಡೆ ಹೊಂದುವ ರಾಜಮಾರ್ಗವು ಒಂದೇ. ಶುದ್ಧವಾದ ಮತ್ತು ಅನಾಸಕ್ತಚಿತ್ತದಿಂದ ಮಾಡಿದ ಪ್ರತಿ ಯೊಂದು ಕರ್ಮವೂ ನಮ್ಮ ಕಾಲಿಗೆ ಬಿಗಿದ ಬಂಧನದ ಒಂದೊಂದೇ ಸರಪಳಿಯನ್ನು ಕಡಿಯುತ್ತ ಹೋಗುವುದು. ಚಿತ್ತವು ಅನಾಸಕ್ತವಾಗಿ ರುವಾಗ ಅದರಿಂದ ಒಂದೇ ಒಂದು ಶುಭವಿಚಾರವು ಹೊರಹೊರಟು ಪ್ರಪಂಚವನ್ನು ಸಂಚಾರ ಮಾಡಿದರೆ, ಅಂಥ ವಿಚಾರಕ್ಕೂ ಇಂಥ ಒಂದೊಂದು ಸರಪಳಿಯನ್ನು ಕಡಿದು ಹಾಕುವ ಸಾಮರ್ಥ್ಯವಿರುತ್ತದೆ. ಶುದ್ಧೀಕರಣ ಕ್ರಿಯೆಯು ಇದೇ ಕ್ರಮದಿಂದ ಪೂರ್ಣವಾಗುತ್ತ ನಾವು ಅತ್ಯಂತ ಪವಿತ್ರರಾಗುತ್ತೇವೆ. ಇದುವರೆಗೆ ಹೇಳಿದ ವಿವೇಚನೆ ಇಷ್ಟು ಸ್ಪಷ್ಟವಾಗಿದ್ದರೂ ಅದು ಕೇವಲ ಹುಚ್ಚರ ಬಡಬಡಿಕೆಯೆಂದು ತಿಳಿದು ಕೊಳ್ಳುವ ಶತಮೂರ್ಖರೂ ಈ ಪ್ರಪಂಚದಲ್ಲಿದ್ದಾರೆ. ಕರ್ಮಯೋಗವು ಕೇವಲ ಮಾತಿನಲ್ಲಿ ಮಾಡತಕ್ಕ ವಿಷಯವೇ ಹೊರತು ಕೃತಿಯಲ್ಲಿ ಕಂಡು ಬರಬಹುದಾದ ವಸ್ತುವಲ್ಲೆಂದು ಹೇಳುವ ಅನೇಕ ಜನರನ್ನೂ ನಾನು ಕಂಡಿದ್ದೇನೆ. ಏನೊಂದು ಹೇತುವಿಲ್ಲದೆ ಕರ್ಮ ಮಾಡುವುದು ಶಕ್ಯವಿಲ್ಲ ವೆಂದೂ ಗೀತೆಯಲ್ಲಿ ಪ್ರತಿಪಾದಿತವಾದ ಮಾರ್ಗವು ನೋಟಕ್ಕೆ ಚಂದ ಕಂಡರೂ ಸರ್ವಥಾ ಅವ್ಯವಹಾರ್ಯವೆಂದೂ ಹೇಳುವ ಅನೇಕ ಜನರೂ ನನಗೆ ಸಿಕ್ಕಿದ್ದಾರೆ. ಆದರೆ ಇದೆಲ್ಲದರ ತಾತ್ಪರ್ಯವಿಷ್ಟೇ: ಅನಾಸಕ್ತ ಚಿತ್ತದಿಂದ ಕರ್ಮಮಾಡುವ ಕರ್ಮಯೋಗಿಗಳನ್ನು ಇವರು ಎಂದೂ ಕಂಡಿಲ್ಲವೆಂದೇ ಹಾಗೆ ಮಾತಾಡುತ್ತಾರೆ. ಕೇವಲ ಪರೋಪಕಾರಕ್ಕಾಗಿ ಕರ್ಮಮಾಡುವುದು ಧರ್ಮಮೂಢ ಜನರಿಗೆ ಮಾತ್ರ ಸಾಧ್ಯವೆಂದು ಇವರು ತಿಳಿಯುತ್ತಾರೆ.

ಕರ್ಮಯೋಗವು ತೋರಿಸಿಕೊಟ್ಟ ಮಾರ್ಗವು ಪೂರ್ಣ ವ್ಯವಹಾರ್ಯ

ವೆಂದು ಭಗವಾನ್ ಬುದ್ಧನು ತಾನು ಸ್ವತಃ ಪೂರ್ಣವಾಗಿ ಆಚರಿಸಿ ಪ್ರತ್ಯಕ್ಷ ಸಿದ್ಧಮಾಡಿ ತೋರಿಸಿದ್ದಾನೆ. ಪ್ರಪಂಚದಲ್ಲಿ ಇದುವರೆಗೆ ಆಗಿಹೋದ ಮಹಾತ್ಮರಲ್ಲಿ ಕರ್ಮಯೋಗದ ಆಚಾರವನ್ನು ಪ್ರತ್ಯಕ್ಷ ತೋರಿಸಿದ ಥ ಮಹಾತ್ಮನು ಇವನೊಬ್ಬನೇ. ಧರ್ಮಪ್ರವರ್ತಕರ ನಡತೆಯಲ್ಲಿ ಒಂದಿಲ್ಲೊಂದು ಹೇತು ಇರುತ್ತಿತ್ತು. ಕೇವಲ ಅಹೇತುಕವಾದ ಚರಿತ್ರೆಯೆಂದರೆ ಒಬ್ಬ ಬುದ್ಧದೇವನದು ಮಾತ್ರ. ಉಳಿದ ಧರ್ಮಪ್ರವರ್ತಕರನ್ನು ಎರಡು ವರ್ಗ ಗಳಲ್ಲಿ ಸೇರಿಸಬಹುದು. ತಾವು ಪ್ರತ್ಯಕ್ಷ ಪರಮೇಶ್ವರನ ಅವತಾರವೆಂದು ಹೇಳುವ ಧರ್ಮಪ್ರವರ್ತರು ಒಂದು ವರ್ಗ. ತಾವು ಕೇವಲ ಪರಮೇಶ್ವರನ ದೂತರಿದ್ದು ಅವನ ಸಂದೇಶವನ್ನು ಮನುಷ್ಯಜಾತಿಗೆ ಒದಗಿಸುವುದೇ ತಮ್ಮ ಕರ್ತವ್ಯವೆಂದು ಹೇಳುವ ಪ್ರವರ್ತಕರು ಇನ್ನೊಂದು ವರ್ಗ. ಈ ತರದ ಪ್ರವರ್ತಕರು ಎಷ್ಟೋ ಉಚ್ಚ ತರಗತಿಯವರಿದ್ದರೂ ಅವರ ಧರ್ಮಬುದ್ಧಿ ಎಷ್ಟೇ ಶ್ರೇಷ್ಠವಿದ್ದರೂ ಅವರು ಕರ್ಮಗಳನ್ನು ಕೇವಲ ಅನಾಸಕ್ತಚಿತ್ತ ದಿಂದ ಮಾಡಿದರೆಂದು ಹೇಳಲು ಬರುವುದಿಲ್ಲ. ಅವರಿಗೆ ಏನಾದರೊಂದು ಪ್ರತಿಫಲದ ಅಪೇಕ್ಷೆಯಿತ್ತು. ವಾದವಿವಾದದ ಸಂದರ್ಭದಲ್ಲಿ ಒಮ್ಮೆ ಭಗವಾನ್ ಬುದ್ಧನು ಹೀಗೆ ಹೇಳಿದ್ದಾನೆ– ‘ ಈಶ್ವರನ ಅಸ್ತಿತ್ವದ ವಿಷಯ ವಾಗಿ ಅಥವಾ ಆತ್ಮನ ಸ್ವರೂಪದ ವಿಷಯವಾಗಿ ನಿಮ್ಮ ಅನೇಕ ಪ್ರಕಾರದ ಉಪಪತ್ತಿಗಳನ್ನು ಕೇಳುವ ಇಚ್ಛೆ ನನಗಿಲ್ಲ. ಪರಮೇಶ್ವರನು ಇರಲಿ ಅಥವಾ ಇಲ್ಲದಿರಲಿ, ಅದರಿಂದ ನನ್ನ ಶೀಲ ಸ್ವಭಾವ ಗುಣಗಳ ಮೇಲೆ ಏನು ಪರಿಣಾಮವಾಗತಕ್ಕದ್ದಿದೆ? ಇಂಥ ಒಣ ತರ್ಕವನ್ನು ಮಾಡಿ ವ್ಯರ್ಥ ಕಾಲ ಹರಣ ಮಾಡುವುದಕ್ಕಿಂತಲೂ ಸನ್ಮಾರ್ಗದಿಂದ ನಡೆಯುವುದರಲ್ಲಿ ಕಳೆದ ವೇಳೆ ಸತ್ಕಾರ್ಯಕ್ಕಾದರೂ ಉಪಯೋಗವಾಗಲಿ. ಎಳ್ಳಷ್ಟಾದರೂ ಸ್ವಂತ ಸುಖದ ಕಲ್ಪನೆಯಿಲ್ಲದೆ ಪರೋಪಕಾರಾರ್ಥವಾಗಿ ಕರ್ಮವನ್ನು ಮಾಡಿರಿ; ಅದರಿಂದ, ಸತ್ಯವೆಂಬುದೇನಿರುವುದೋ ಅದನ್ನು ನೀವು ಪ್ರತ್ಯಕ್ಷವಾಗಿ ಕಂಡು ಮುಕ್ತರಾಗುವಿರಿ. ’ ಬುದ್ಧನ ಇಡೀ ಜೀವನಯಾತ್ರೆಯಲ್ಲಿ ಸ್ವಂತ ಸುಖದ ಕಲ್ಪನೆಯು ಕೂಡ ಅವನನ್ನು ಮುಟ್ಟಲಿಲ್ಲ. ಅವನ ಚಿತ್ತವು ಇಷ್ಟು ಅಹೇತುಕವಾಗಿದ್ದರೂ ಅವನು ಮಾಡಿದ ಕಾರ್ಯಭಾಗದ ನೂರರಲ್ಲಿ ಒಂದು ಅಂಶವನ್ನಾದರೂ ಎರಡನೆಯವರು ಮಾಡಿತೋರಿಸುವರೆಂದು ಹೇಳಲಾಗು ವುದಿಲ್ಲ. ಜಗತ್ತಿನ ಇತಿಹಾಸದಲ್ಲಿ, ಇಷ್ಟು ಅನಾಸಕ್ತ ಚಿತ್ತದಿಂದ ಇಷ್ಟು

ಮಹತ್ತಾದ ಕಾರ್ಯಭಾಗವನ್ನು ಮಾಡಿದ ಒಂದು ಉದಾಹರಣೆಯೂ ನಮಗೆ ದೊರಕುವಂತಿಲ್ಲ. ಮನುಷ್ಯ ಜಾತಿಯು ಹುಟ್ಟಿದಂದಿನಿಂದ ಇದುವರೆಗೆ ಇಷ್ಟೇ ಪ್ರಪಂಚದಲ್ಲಿ ಹುಟ್ಟಿರುವ ನರರತ್ನವು ಇದೊಂದೇ. ಕೇವಲ ಪರಾರ್ಥ ಚಿಂತನ, ನಿಃಸೀಮತ್ಯಾಗ ಮತ್ತು ಅತ್ಯಂತ ನಿರಪೇಕ್ಷಬುದ್ಧಿ ಇವುಗಳ ಮನೋಹರಸಂಯೋಗವು ನಿಮಗೆ ಮತ್ತೆಲ್ಲಿಯೂ ದೊರಕುವಂತಿಲ್ಲ. ಅತ್ಯಂತ ಉಚ್ಚತರದ ತತ್ವಜ್ಞಾನವನ್ನು ಹೇಳುತ್ತಿರುವಾಗಲೂ, ನೀಚತಮವಾದ ಪ್ರಾಣಿಯ ವಿಷಯದಲ್ಲಿಯೂ, ಅತ್ಯಂತ ಕಳವಳವು ಅವನ ಅಂತಃಕರಣದಲ್ಲಿ ವಾಸಮಾಡುತ್ತಿತ್ತು. 'ನಾನು, ನನ್ನದು' ಎಂಬ ಶಬ್ದಗಳ ಅರ್ಥವನ್ನು ಅವನು ಮರೆತಿದ್ದನು. ಕರ್ಮಯೋಗದ ಶುದ್ಧ ಆದರ್ಶವನ್ನು ನೋಡುವುದಿದ್ದರೆ ನೀವು ಬುದ್ಧನ ಕಡೆ ನೋಡಿರಿ. ಅವನ ಹೃದಯದಲ್ಲಿ ಕೊಂಚವೂ ಅಹಂಕಾರವಿದ್ದಿಲ್ಲ. ಬುದ್ಧಿ ಮತ್ತು ಅಂತಃಕರಣಗಳ ಪರಿಪಕ್ವದೆಶೆಯನ್ನು ಒಂದೆಡೆಯಲ್ಲಿ ಕಾಣುವುದಿದ್ದರೆ ಬುದ್ಧನನ್ನು ಹೊರತು ಇನ್ನೆಲ್ಲಿಯೂ ನೋಡಲು ಸಿಕ್ಕುವುದಿಲ್ಲ. ಜೀವಾತ್ಮನ ಇದಕ್ಕೂ ಹೆಚ್ಚಿನ ಉಜ್ವಲ ರೂಪವನ್ನು ನೀವು ಮತ್ತೆಲ್ಲಿಯೂ ಕಾಣಲಾರಿರಿ. ಮನುಷ್ಯ ಜಾತಿಯು ಸನ್ಮಾರ್ಗವನ್ನು ಹಿಡಿಯಬೇಕೆಂಬ ಒಂದೇ ಒಂದು ಉದ್ದೇಶದಿಂದ ಹೋರಾಡಿದ ಮಹಾತ್ಮನು ಇವನೇ. ಒಮ್ಮೆ ಅವನು ತನ್ನ ಶಿಷ್ಯನಿಗೆ ಹೀಗೆ ಹೇಳಿದ್ದಾನೆ– ' ಇಂಥ ಒಂದು ಮಾತನ್ನು ಇಂಥ ಒಂದು ಹಳೆಯ ಗ್ರಂಥದಲ್ಲಿ ಹೇಳಿರುವುದೆಂಬಷ್ಟರಿಂದಲೆ ಅದು ಸತ್ಯವೆಂದು ತಿಳಿದುಕೊಳ್ಳಬೇಡಿ. ನಿಮ್ಮ ಆಪ್ತೇಷ್ಟರು ಹೇಳುತ್ತಾರೆಂಬುದರಿಂದಲೇ ಅದು ನಿಜವೆಂದು ನಂಬಬೇಡಿ. ಚಿಕ್ಕಂದಿನಿಂದ ಹಿರಿಯರು ಹೇಳಿದ್ದಾರೆಂಬುದರಿಂದಲೇ ಅದು ಸತ್ಯವೆಂದು ತಿಳಿಯಬೇಡಿ. ನೀವು ಕೇಳಿದ್ದನ್ನೆಲ್ಲ ಬುದ್ಧಿಯೆಂಬ ಒರೆಗಲ್ಲಿಗೆ ಹಚ್ಚಿ ತಿಕ್ಕಿ ನೋಡಿರಿ. ಅದು ಉತ್ತಮವೆಂದು ಕಂಡುಬಂದರೆ ಅದು ಸತ್ಯವೆಂದು ತಿಳಿದು ಅದನ್ನು ನೀವು ಪ್ರತ್ಯಕ್ಷವಾಗಿ ಆಚರಿಸಿ ಇತರರಿಗೂ ಹಾಗೆ ಮಾಡಲು ಹೇಳಿ, ಸಹಾಯ ಮಾಡಿರಿ.' ಹಳೆಯದೆಲ್ಲ ಹೊನ್ನು ಎಂಬುದೇ ಇಡಿಯ ಜಗತ್ತಿನ ಪ್ರವೃತ್ತಿಯಾದರೂ ಅದರ ವಿರುದ್ಧವಾಗಿ ನಿರ್ಭೀತನಾಗಿ ಉಪದೇಶಮಾಡಿದ ವೀರನು ಎಷ್ಟು ಕೆಚ್ಚೆದೆಯವನೆಂಬ ಯೋಚನೆಯನ್ನು ನೀವೇ ಮಾಡಿರಿ. ಕೇವಲ ದೊಡ್ಡ ಹೆಸರಿನಿಂದ ಮೋಸಗೊಳ್ಳಬೇಡಿರೆಂದು ಸ್ಪಷ್ಟವಾಗಿ ಉಪದೇಶ ಮಾಡಿದ ಮಹಾತ್ಮರು ಇನ್ನಾರೂ ಆಗಿ ಹೋಗಿಲ್ಲ.

ಅತ್ಯಂತ ಅನಾಸಕ್ತ ಚಿತ್ತದಿಂದ ಕರ್ಮಮಾಡಿ ಬುದ್ಧನ ಪದವಿಯನ್ನು ಸಂಪಾದಿಸುವುದು ನಿಮಗೆ ಅಶಕ್ಯವಲ್ಲ. ಇಡೀ ಜಗತ್ತಿಗೆ ಹೊಸ ಮಾರ್ಗ ವನ್ನು ತೋರಿಸಿ ಕೊಡುವ ಸಾಮರ್ಥ್ಯವು ನಿಮಗೂ ಬರುವಂತಿದೆ. ಅದು ನಿಮಗೆ ಸಾಧಿಸಿದರೆ ನೀವೇ ಕರ್ಮಯೋಗದ ಆದರ್ಶರಾಗುವಿರಿ.

**ಓಂ ಶಾಂತಿಃ ಶಾಂತಿಃ ಶಾಂತಿಃ**



## ಸರಸ ಸಾಹಿತ್ಯ

| | | |
|---|---|---|
| ಸಂಸಾರ ಚಿತ್ರ | ಆನಂದ ಕಂದ | ೨—೪—೦ |
| ಸಂಪಿಗೆ | ಕುಲಕರ್ಣಿ ಶ್ರೀನಿವಾಸ | ೦-೧೦—೦ |
| ಅಕ್ಕ ತಂಗಿ | ನಾರಾಯಣ ಸಂಗಮ | ೨—೮—೦ |
| ಹಾಳು ಮನೆ | ರವೀಂದ್ರನಾಥ ಠಾಕೂರ್ | ೧—೪—೦ |
| ಕಾಬೂಲಿವಾಲಾ | | ೧—೮—೦ |
| ತಿರುಗಿ ಮನೆಗೆ | ಚಾರು ವಂದ್ಯೋಪಾಧ್ಯಾಯ | ೧-೧೦—೦ |
| ನೃತ್ಯಕಾಲಿ | ” | ೦—೬—೦ |
| | ಪತ್ತೆದಾರಿ | ೧—೪—೦ |
| ಭೂಮಿಗಿಳಿದ ತಾರೆ | ವಿ. ಚ. ಹಿತ್ತಿಲುಮನೆ | ೧-೧೨—೦ |
| ಎನ್ಕೆ ಏಕಾಂಕಗಳು | ಎನ್ಕೆ ಕುಲಕರ್ಣಿ | ೨—೦—೦ |
| ನಂದಾದೀಪದ ನಂದಿನಿ | ಕೆ. ಶ್ರೀಧರ | ೧—೮—೦ |
| ಡಾ. ಹರಡೀಕರರು | ರಾ. ವೆ. ಕರಿಗುದರಿ | ೧—೦—೦ |
| ಮಗಳಿಗೆ ತಂದೆಯ ಓಲೆಗಳು | ಪ. ನೆಹರು | ೧-೧೨—೦ |
| ಭರತಖಂಡದ ಜೀವಜ್ಯೋತಿಗಳು (೧) | ಚಿದಂಬರಯ್ಯ | ೧—೦—೦ |
| ಭರತಖಂಡದ ಜೀವಜ್ಯೋತಿಗಳು (೨) | ” | ೧—೪—೦ |
| ಯುದ್ಧರಂಗದಿಂದ | ಆರ್. ಎ. ರಾವ್ | ೧—೪—೦ |
| ಗ್ರೀಕ್ ನಾಟಕ ಕತೆಗಳು | ಡಿ. ವಿ. ಶೇಷಗಿರಿರಾಯರು | ೨—೮—೦ |
| ಮಾತೃವಾಣಿ (೨) | ಅರವಿಂದ ಸಾಹಿತ್ಯ | ೦—೨—೦ |
| ಅರವಿಂದ ದರ್ಶನ | ” | ೩—೦—೦ |

ಸಾಹಿತ್ಯ ಭಾಂಡಾರ, ಹುಬ್ಬಳ್ಳಿ

## ಗಾಂಧೀ ಸಾಹಿತ್ಯ

| | |
|---|---|
| ಮಕ್ಕಳ ಮಹಾತ್ಮಾ ಗಾಂಧಿ | ೦—೧೨—೦ |
| ನನ್ನ ಆರಂಭ ಜೀವನ | ೧—೮—೦ |
| ಗಾಂಧೀವಿಚಾರದೋಹನ | ೩—೦—೦ |
| ಸ್ತ್ರೀಯರ ಸಮಸ್ಯೆಗಳು | ೧—೪—೦ |
| ಮಂಗಲ ಪ್ರಭಾತ | ೦—೧೨—೦ |
| ಭಾರತದಿಂದ ತೊಲಗಿರಿ | ೧—೪—೦ |

## ಶರತ್ ಸಾಹಿತ್ಯ

| | |
|---|---|
| ನವವಿಧಾನ | ೦—೧೪—೦ |
| ಸತಿವಿರಾಜ | ೨—೪—೦ |
| ಚಂದ್ರನಾಥ | ೧—೪—೦ |
| ಭೈರವಿ | ೩—೪—೦ |